# ಪಂಚಮ

ಸಂಪುಟ: 12
ಸಂಚಿಕೆ: 11-12
ಜೂನ್ 1988
ಬೆಲೆ: [illegible] ರೂ.



ಒಡಲೊಳಗೆ......

# ಅನುಭವದ ಗಣಿಯಿಂದ

## "ಹಂದಿ ಬಾಡು"ಗೆ ಹೊಡೆದಾಡಿದವನು

ನನ್ನ ರೀತಿ ಅನೇಕರಿಗೆ ಈ ಥರದ ಅನುಭವವಾಗಿರಬೇಕು. ಅಥವಾ ಅವರಿವರು ಆಡುವ ಮಾತುಗಳನ್ನು ಕೇಳಿರಬೇಕು. ಅದೆಂದರೆ—

ಹೊಲೇರು ಕೊಳಕು ಯಾಕಂದ್ರೆ, ಅವರು, ನಾವು ಪೂಜೆಮಾಡೋ ದನದ, ಹಸುವಿನ ಮಾಂಸ ತಿಂತಾರೆ.

ಅವರು ದನದ ಮಾಂಸ ತಿನ್ನುವುದರಿಂದಲೇ ಅವರು ಹೀನ ಕುಲದವರು, ಸ್ವಚ್ಛತೆಗೊತ್ತಿಲ್ಲದವರು! ನನ್ನ ಗೆಳೆಯರಲ್ಲಿ, ಶಾಲೆ ಕಾಲೇಜಿನಲ್ಲಿ ಇಂಥ ಆರೋಪಗಳನ್ನು ಕೇಳಿದ್ದೇನೆ. ನಾನೊಮ್ಮೆ ನಮ್ಮ ಹಳ್ಳಿಗೆ ಹೋದಾಗ ನನಗೆ ವಿಚಿತ್ರ ಅನುಭವವಾಯಿತು.

ಅಂದು ಶಿವರಾತ್ರಿ ಇತ್ತು. ಫೆಬ್ರುವರಿ ತಿಂಗಳು. ಶಿವರಾತ್ರಿಯ ಮರುದಿನ ಕರಿಹಬ್ಬ ಮಾಡುವುದು ನಮ್ಮ ಹಳ್ಳಿಯ ಸಂಪ್ರದಾಯ. ವರ್ಷಕ್ಕೊಮ್ಮೆ ಮಾಡುವ ಹಬ್ಬವಾದ್ದರಿಂದ ಹಟ್ಟಿಯ ಹಿರಿಯರೆಲ್ಲ ಸೇರಿ, ಒಂದು ಕೋಣ ತರಲು ತಾವು ಕೂಡಿಟ್ಟ ಜೀತದ ಹಣದ ಲೆಕ್ಕಹಾಕಲು, ಮಾತಾಡಲು ನಮ್ಮ ಹಟ್ಟಿಯ ಮಧ್ಯದಲ್ಲಿರುವ ಬೇವಿನ ಮರದ ಕೆಳಗೆ ಕುಳಿತಿದ್ದರು. ಅಷ್ಟರಲ್ಲಿ ನಮ್ಮೂರಿನ ಒಕ್ಕಲಿಗ ಯುವಕನೊಬ್ಬ ಅಲ್ಲಿಗೆ ಬಂದು–ಥೂ ನಿಮಗಿನ್ನೂ ಬುದ್ಧಿ ಬರಲಿಲ್ಲ—ಎಂದು ಬೈದು ಹೊರಟುಹೋದ. ನಂತರ ಊರಿಂದ ತುಸುದೂರದಲ್ಲಿರುವ ನಮ್ಮ ಹಟ್ಟಿಗಳಿಂದ ಮಾತು ಮುಗಿಸಿದ ಹಿರಿಯರು ಮಲಗಲು ಹೋದರು.

ಎಂದಿನಂತೆ ಬೆಳಗಾಯಿತು. ಸುಮಾರು 9ರ ಹೊತ್ತಿಗೆ ಹಟ್ಟಿಯ ಮೇಲ್ಭಾಗದಲ್ಲಿರುವ ಸ್ವಚ್ಛವಾದ ಬಂಡೆಯ ಬಳಿ ಕೋಣವನ್ನು ಕೊಯ್ದು ಬಂಡೆಯ ಮೇಲೆ ಕೊಯ್ದು ತುಂಡುಗಳನ್ನು ಎಲ್ಲರಿಗೂ ಕೊಡಲು ಗುಡ್ಡೆ ಹಾಕಿದರು. ಎಲ್ಲರ ಮನೆಗಳಿಗೂ ಮಾಂಸದ ಕರೆ ಹೋದ ನಂತರ ಒಬ್ಬೊಬ್ಬರೆ ಬಂದು ತಮ್ಮ ಪಾಲಿನಗುಡ್ಡೆಗಳನ್ನು ಒಯ್ಯತೊಡಗಿದರು. ಅದೇ ವೇಳೆ ರಾತ್ರಿ ಛೀ! ಥೂ; ಎಂದು ಉಗಿದುಹೋಗಿದ್ದ ಒಕ್ಕಲಿಗರ ಯುವಕ ತನ್ನ ಇಬ್ಬರು ಸಂಗಡಿಗರೊಂದಿಗೆ ಬಂದ. ಕೈಯಲ್ಲಿ ಒಂದು ಟಿಫಿನ್ ಕ್ಯಾರಿಯರ್ ಬೇರೆ ಇತ್ತು. ಆಗಲೂ ಕೋಣದ ಭಾಗಗಳನ್ನು ಗುಡ್ಡೆ ಹಾಕಿದ್ದ ಕಡೆ ಹೋಗಿ–'ಥೂತ'! ಯಾಕ್ರೋ ಇಂಗೆ ಬಾಡು ಬಾಡು ಅಂತ ಸಾಯ್ತಿರೋ'ಎಂದು ಹೀನಾಯವಾಗಿ ಬೈಯುತ್ತ, ಜತೆಲಿದ್ದವರೊಂದಿಗೆ ನಗುತ್ತ ಹೊರಟು ಹೋದ. ಎಲ್ಲರೂ ತಮ್ಮ ಪಾಲಿನ ಮಾಂಸವನ್ನು ತೆಗೆದುಕೊಂಡು ಹೋಗಿ ಬಾಡೂಟವನ್ನು ಸಿದ್ಧಪಡಿಸಲು ಹಟ್ಟಿಗಳಿಗೆ ತೆರಳಿದರು.

ಮಧ್ಯಾಹ್ನ 12 ಗಂಟೆಯಾಗಿತ್ತು. ಊರಾಚೆಯಿರುವ ಮುನಿಯಪ್ಪನ ಬಂಡೆಯ ಹತ್ತಿರ ಜೋರಾಗಿ ಗಲಾಟೆಯಾಗುತ್ತಿದ್ದ ಶಬ್ದ ಕೇಳಿಸಿತು. ಅಲ್ಲಿ 50-60 ಜನರ ಗುಂಪೂ ಸೇರಿತ್ತು. ನಮ್ಮ ಹಟ್ಟಿಯವರೆಲ್ಲ ಗಲಾಟೆ ಏನೆಂದು ನೋಡಲು ಅಲ್ಲಿಗೆ ಹೋದೆವು. ಆಗ ಗೊತ್ತಾದದ್ದು

'ಬೆಳಿಗ್ಗೆ ಬಾಡಿಗ್ಯಾಕೆ ಸಾಯ್ತಿರೋ' ಎಂದು ಥೂ ಕರಿಸಿಹೋಗಿದ್ದ ಒಕ್ಕಲಿಗರ ಯುವಕ ತಾನು ತಡವಾಗಿ ಹೋದ ಕಾರಣದಿಂದ ಹಂದಿಬಾಡು ಸಿಗಲಿಲ್ಲವೆಂದು ಹಂದಿ ಕೊಯ್ದವನನ್ನು ಹೊಡೆಯಲು ಹೊರಟಿದ್ದು ನಾವು ಅಲ್ಲಿದ್ದವರಿಗೆ 'ಯಾಕೆ ಜಗಳ ವಾಡ್ತಿದ್ದೀರಿ' ಅಂತ ಕೇಳಿದೆವು. ಅದಕ್ಕೆ ಅವರು "ನೋಡ್ರಪ್ಪ, ಆವಯ್ಯ 30 ರೂಪಾಯಿ ಕೊಟ್ಟಿದ್ದ ನಾನು 2 ಗುಡ್ಡೆ ಎತ್ತಿಕ್ಕಿದ್ದೀ. ಈಗ ಬಂದು ನಂಗೆ ನಾಲ್ಕು ಗುಡ್ಡೆ ಬೇಕು ಅಂತಾನೆ. ಭಾಳಾಜನಾ ಆಗ್ಲಿಂದ ಕಾಯ್ತಾ ಅವ್ರೆ ಅವ್ರಿಗೆಲ್ಲಕೊಡ್ಬೇಕು ಆಗಾಕಿಲ್ಲ ಅಂದಿದ್ದಕ್ಕೆ ಜಗಳಾ" ಮಾಡ್ತಿದಾನೆ ಎಂದು ಹೇಳಿದರು.

ಆಗ ಅಲ್ಲಿದ್ದವರೆಲ್ಲ ಅವನನ್ನು ಬೈದು. ಬುದ್ಧಿ ಹೇಳಲು ಹೋದಾಗ ಅವನು ತಿರುಗಿ ನಮ್ಮನ್ನೆ ಹೊಡೆಯಲು ಬಂದ. ಬಾಡು ಬೇಡ ನಾನೇ ಹಂದಿ ಮರಿನ್ನ ತಂದು ಕುಯ್ತೀನಿ ಎಂದು ಹೊರಟುಹೋದ ಅವನಿಂದ ಬೈಸಿಕೊಂಡ ಹೊಲೆಯರೆ ಹೋಗಿ ಸಮಾಧಾನ ಮಾಡಿ–ಬಾಡನ್ನು ಕೊಟ್ಟು ಕಳಿಸಿದರು.

**ಭರತ್ ಕುಮಾರ, ಬೆಲ್ಲನಮಡು**

## 'ನಾವೆಲ್ಲ ಜವಾಬ್ದಾರಿ ಹೊರಬೇಕು'

# ಪತ್ರಗಳು

ಪ್ರಿಯ ಸಂಪಾದಕರೆ,

ಅಂಬೇಡ್ಕರ್ ಅವರ 97ನೇ ಜನ್ಮ ದಿನದ ಸಂದರ್ಭದಲ್ಲಿ ಹೊರ ಬಂದ ನಿಮ್ಮ ಪತ್ರಿಕೆಯ ವಿಶೇಷಾಂಕವನ್ನು ಕಂಡು ತುಂಬಾ ಸಂತೋಷವಾಯಿತು. ಹಲವಾರು ವಿಚಾರಪೂರಿತ ಲೇಖನಗಳಿದ್ದು ಅವು ದಲಿತರ ನೋವಿನ ನಲೆಯಿಂದ ಹೊರ ಒಮ್ಮಿದ ಧ್ವನಿಗಳಾಗಿವೆ, ಹಾಗೂ ವಿಚಾರವಂತರ ಮೇಲೆ ಪರಿಣಾಮ ಬೀರುವಂತಿದೆ. ಅದಕ್ಕಾಗಿ ನಿಮಗೆ ಕೃತಜ್ಞತೆಗಳು.

ಇತರ ಪತ್ರಿಕೆಗಳಿಗಿಂತ ಭಿನ್ನವಾಗಿದ್ದು ಹಲವಾರು ಕೆಲಸಕ್ಕೆ ಬಾರದ ವಿಷಯಗಳಿಂದ ದೂರವಿದ್ದು, ದಲಿತರ ಸಮಸ್ಯೆಗಳ ಕುರಿತು ಬರುವ ನಮ್ಮ ಪತ್ರಿಕೆಗಳು ನಮಗೆ ಮಾತ್ರ ಸೀಮಿತವಾಗಿವೆ. ಅದಕ್ಕೆ ಕಾರಣಗಳು ಹಲವಾರು ಇವೆ. ನಮ್ಮ ವಿದ್ಯಾವಂತ ದಲಿತರು ನಮ್ಮ ಪತ್ರಿಕೆಗಳನ್ನು ಪ್ರೋತ್ಸಾಹಿಸಿದಾಗ ಬೇರೆ ಜನರು ಹೇಗೆ ತಾನೆ ಪ್ರೋತ್ಸಾಹಿಸಿಯಾರು ? ಎಷ್ಟೋ ಜನರಿಗೆ 'ಪಂಚಮ'ದ ಬಗ್ಗೆ ಗೊತ್ತೇ ಇಲ್ಲ. ಈ ದಿಸೆಯಲ್ಲಿ ನಾವೆಲ್ಲ ಪಂಚಮ ಬೆಳೆಸುವ ಜವಾಬ್ದಾರಿ ಹೊರಬೇಕಿದೆ.

**ಮಹಾದೇವ**
ಶಂಕನಪುರ

ಪ್ರಿಯ ಸಂಪಾದಕರಿಗೆ,

ಅಂಬೇಡ್ಕರ್ ಜನ್ಮ ದಿನದ ವಿಶೇಷ ಸಂಚಿಕೆ ನಿಜಕ್ಕೂ ಬಹಳ ಚೆನ್ನಾಗಿತ್ತು. ಅನೇಕ ಉ[illegible]ಕ್ತ ಲೇಖನಗಳಿಂದ ಕೂಡಿತ್ತು. ರುದ್ರಸ್ವಾ[illegible]ದ್ರಶೇಖರ್‌ರವರ ಲೇಖನಗಳು ವಿಚಾರಪೂ[illegible]ದ್ದವು. ಸರಜೂ ಕಾಟಕರ ಅವರ 'ಅಂಬೇಡ್ಕರ್ ಮತ್ತು ಧರ್ಮಾಂತರ' ಲೇಖನ ಮತ್ತೊಮ್ಮೆ ಯೋಚಿಸುವಂತೆ ಮಾಡಿತು.

**ರಾಮಚಂದ್ರ ನಾಯ್ಕ**
ಅಂಕೋಲಾ

ಮಾನ್ಯರೇ,

'ಹಿಂದೂ ಆಗಿರಲು ಅಭಿಮಾನ ಪಡುವುದೇಕೆ?' ರಾಜ್‌ಕಿಶೋರ್‌ರವರು ಬರೆದ ಲೇಖನ ನನ್ನನ್ನು ವಿಚಾರ ಮಾಡುವಂತೆ ಮಾಡಿದೆ. ಪ್ರತಿ ದಿನದಿನಕ್ಕೂ ತನ್ನ ಹೀನ ಮನಸ್ಸಿನ ವಿಕೃತಿಗಳನ್ನು ತೋರಿಸುವಲ್ಲಿ ದಾಪುಗಾಲಿಡುತ್ತಿರುವ ಈ ಧರ್ಮದಲ್ಲಿ ನಾವು ಇರಬೇಕಾದರೆ ಏಕೆ ?

**ಮಾರಪ್ಪ ಕಲ್ಲುಗಂಡಿ**
ಹೊಸಪೇಟೆ

**(ಈ ಅಂಕಣಕ್ಕೆ 'ಪಂಚಮ'ದಲ್ಲಿ ಪ್ರಕಟವಾದ ಬರಹಗಳ ಕುರಿತು ಅಭಿಪ್ರಾಯಗಳನ್ನು ಬರೆದು ಕಳಿಸಿ!**
**–ಸಂ.**

# ಕಡಲ ತಡಿಯ ಹೋರಾಟದ ಹೆಜ್ಜೆಗಳು

ಏಪ್ರಿಲ್ 17ರಂದು ಮಂಗಳೂರಿನಲ್ಲಿ ನಡೆದ ಅಂಬೇಡ್ಕರ್ ಜನ್ಮದಿನದ ಒಂದು ದೃಶ್ಯ.



**ಧರ್ಮ-ವಾಣಿಜ್ಯ-ಕೋಮುವಾದಗಳ ವಿಚಿತ್ರ ಮಿಶ್ರಣದಡಿ ಕೆಳಜಾತಿಗಳು ಎಲ್ಲ ಬಗೆಯ ಸಂಪನ್ಮೂಲಗಳಿಂದ ದೂರವಾಗಿ ತಬ್ಬಲಿತನ ಅನುಭವಿಸುತ್ತಿರುವ ಕರಾವಳಿ ಜಿಲ್ಲೆಯಲ್ಲಿ ಬೇರುಬಿಡುತ್ತಿರುವ ದ. ಸಂ. ಸ.ದ ಒಂದು ಅವಲೋಕನ.**

**ಕೆ. ಪಿ. ಅಮೀನ್, ಪೇಜಾವರ**

ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಕನ್ನಡ ಕರಾವಳಿಯ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಪುರೋಹಿತಶಾಹಿಗಳ ಪ್ರಾಬಲ್ಯವಿದ್ದು. ಅವರು ಸಾಮಂತ ರಾಜರಾಗಿದ್ದರು. ಭೂಮಿಗಳೆಲ್ಲ ಇವರದ್ದೆ ಆಗಿತ್ತು. ಇವರ ಜಮೀನುಗಳಿಗೆ ವರ್ಗವೆಂದು ಕರೆಯುತ್ತಿದ್ದರು. ಬಳಿಕ ಬಂಟರು ಪುರೋಹಿತಶಾಹಿಗಳ ಅಧೀನದಲ್ಲಿದ್ದು ಅವರೂ ಜಮೀನು ಹೊಂದಿದ್ದರು. ಅಂದು ಮೂಲಗೇಣಿ ಚಾಲಗೇಣಿ ಈ ಎರಡು ಪದ್ಧತಿಗಳಲ್ಲದೆ ವಾಯಿದೆ ಗೇಣಿ ಎಂಬ ನಿಶ್ಚಿತ ಅವಧಿಯ ಗೇಣಿ ಪದ್ಧತಿ ಕೂಡಾ ಇತ್ತು. ಮೇಲಿನವರ ಜಾಮೀನುಗಳಿಗೆ ಬಿಲ್ಲವರು ಗೇಣಿದಾರರಾಗಿದ್ದರು, ದಲಿತರು ಮಾತ್ರ ಎಲ್ಲಾ ಸೌಲಭ್ಯಗಳಿಂದಲೂ ವಂಚಿತರಾಗಿ ಜೀತದಾಳುಗಳಾಗಿಯೇ ಕಾಲ ಕಳೆಯುತ್ತ ಬಂದರು.

ಬ್ರಿಟಿಷರಿಗಿಂತ ಮೊದಲು ಭೂಮಿ ಮತ್ತು ಜಾತಿ ಸಂಬಂಧವಾಗಿ ಕೋಟಿಚೆನ್ನಯ್ಯ ಎಂಬೀ ಬಿಲ್ಲವ ವ್ಯಕ್ತಿಗಳು ಜೈನರ ಮತ್ತು ಬಂಟರ ವಿರುದ್ಧ ಚಳವಳಿ ಮಾಡಿದರು. ಆದರೆ ಅಷ್ಟೊಂದು ಪರಿಣಾಮಕಾರಿ ಚಳವಳಿಯಾಗದೆ ಪುರೋಹಿತಶಾಹಿ ಮೌಲ್ಯಗಳನ್ನೇ ಅನುಸರಿಸಿಕೊಂಡು ಉದಾರಿಗಳಾಗಿ ನಡೆಕೊಂಡರು. ಮುಗ್ಗೆರ್ಲು, ಕೊರ್ದಬ್ಬು ಮೊದಲಾದ ದಲಿತ ವ್ಯಕ್ತಿಗಳನ್ನು ಉಳ್ಳವರು ಸಾಕಷ್ಟು ಬಳಸಿಕೊಂಡು ಚಳವಳಿ ಮಾಡಿದರು. ಸ್ವಂತ ನೆಲೆ ಮತ್ತು ಆರ್ಥಿಕ ಬಲವಿಲ್ಲದೆ, ಸ್ವಾಭಿಮಾನದ ಪ್ರಜ್ಞೆಯನ್ನೂ ಕಳಕೊಂಡು ಊಳಿಗದಲ್ಲಿಯೇ ತಮ್ಮ ಜೀವ ಸವೆಸಿದ್ದರೆಂಬುದು "ಜಾನಪದ ಸಾಂಸ್ಕೃತಿಕ ಕಲೆ"ಯನ್ನು ವೈಚಾರಿಕ ವಲಯದಲ್ಲಿ ಅರ್ಥಮಾಡಿದಾಗ ತಿಳಿದುಬರುತ್ತದೆ. ಈ ದಲಿತ ವ್ಯಕ್ತಿಗಳನ್ನು ಬಳಸಿಕೊಂಡು ಹೋರಾಟ ನಡೆದದ್ದು ಬ್ರಿಟಿಷ್ ಆಡಳಿತಕ್ಕಿಂತ ಮೊದಲು ಸುಮಾರು 1336ರ ಕಾಲವೆಂದು ನಂಬಲಾಗಿದೆ. ಉತ್ತರ ಕನ್ನಡದ ಹಾಲಕ್ಕಿ ಒಕ್ಕಲಿಗ (ಗೌಡ) ರಿಗೂ "ಗೊಂಡ"ರಿಗೂ ಸಾಮ್ಯತೆಗಳಿಲ್ಲ. 'ಗೊಂಡ'ರು ದಲಿತರು.

### ಬ್ರಿಟಿಷರ ವಿರೋಧ ಬಂಡಾಯ :

ಬ್ರಿಟಿಷರ ಕಾಲದಲ್ಲಿ 1834ರ ನಂತರ ಕನ್ನಡ ಕರಾವಳಿಯಲ್ಲಿ ಕೃಷಿಕರು ಬ್ರಿಟಿಷರ ವಿರುದ್ಧ ಬಂಡೆದ್ದರು. ಅದು ಭೂ ಕಂದಾಯದ ಭಾರವನ್ನು ತಾಳಲಾರದೆ, ಅದಕ್ಕೆ ಪ್ರತಿಭಟನೆಯೆಂದು ಎದ್ದ ಚಳವಳಿಯಾಗಿದ್ದಿತು. ಜನರು ಬ್ರಿಟಿಷರಿಗೆ ಭೂಕಂದಾಯ [illegible] ನಿರಾಕರಿಸಿ ದಂಗೆಕೋರ ಕೂಟಗಳಲ್ಲಿ ತಮ್ಮನ್ನು ಸಂಘಟಿಸಿಕೊಂಡರು. ತಮ್ಮ ಚಳವಳಿಯ ಅನುಕೂಲಕ್ಕಾಗಿ ದಲಿತರನ್ನೂ ಬಳಸಿಕೊಂಡರು.

## ದಂಗೆಕೋರರ ನಿರ್ನಾಮ

1835-1837ರ ಕನ್ನಡ ಕರಾವಳಿಯ ಕೊಡಗಿನ ದಂಗೆ ಇನ್ನೊಂದು ಗಂಭೀರ ಘಟನೆ. ಬ್ರಿಟಿಷರು ಚಿಕ್ಕವೀರ ರಾಜನನ್ನು ಪದಚ್ಯುತಗೊಳಿಸಿ ಕೊಡಗು ಪ್ರದೇಶವನ್ನು ವಶಪಡಿಸಿಕೊಂಡರು. ಇದು ಕೆಲವು ವರ್ಗಗಳಲ್ಲಿ ಅಸಂತುಷ್ಟಿಗೆ ಕಾರಣವಾಯಿತು. ಆಗ ಸ್ವಾಮಿ ಅಪರಂಪಾರನೆಂಬ ಜಂಗಮನು 1835ರಲ್ಲಿ ದಂಗೆಕೋರರ ನಾಯಕತ್ವ ವಹಿಸಲು ಯತ್ನಿಸಿದನು. ಕೊಡಗಿನ ಸಿಂಹಾಸನಕ್ಕೆ ತನ್ನ ಹಕ್ಕು ಪ್ರಸ್ತಾಪಿಸಲು ಯತ್ನಿಸಿದಾಗ ಅವನನ್ನು ಬ್ರಿಟಿಷರು ಸೆರೆಹಿಡಿದರು. ನಂತರ ಕಲ್ಯಾಣಸ್ವಾಮಿ ಎಂಬುವನು ತಾನು ರಾಜವಂಶದವನೆಂದು ವಾದಿಸುತ್ತಾ ಈ ಚಳವಳಿಯನ್ನು ಮುಂದುವರೆಸಿಕೊಂಡು ಹೋಗಲು ಯತ್ನಿಸಿದನು. ಅವನನ್ನು 1807ರಲ್ಲಿ ಬ್ರಿಟಿಷರು ಬಂಧಿಸಿದರು. ಇಲ್ಲಿಯೂ ಸಹ ದಲಿತರರ್ನು ಚಳವಳಿಗೆ ಬಳಸಿಕೊಂಡರು ದಂಗೆಕೋರರು.

ಈ ಬಂಡಾಯವು ಮುಖ್ಯವಾಗಿ ಘಟ್ಟದ ಕೆಳಗಿನ ಪ್ರದೇಶಗಳೆಲ್ಲೂ ಪಸರಿಸಿತು. ಇದಕ್ಕೆ ಕಾರಣ ಕಂದಾಯವನ್ನು ನಗದು ಹಣದ ರೂಪದಲ್ಲಿ ಕೊಡಬೇಕೆಂದು ಬ್ರಿಟಿಷ್ ಸರ್ಕಾರ ವಿಧಿಸಿದ್ದಕ್ಕೆ ಅಲ್ಲಿಯ ರೈತರು ಕುಪಿತರಾದದ್ದು. ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುಗಳಾದ ಸುಳ್ಯ, ಪುತ್ತೂರು, ಬಂಟವಾಳ, ಮಂಗಳೂರು ದಂಗೆಕೋರರ ಬಲವಾದ ಠಾಣ್ಯಗಳಾಗಿದ್ದವು. ಚಳವಳಿಗಾರರು ಮಂಗಳೂರಿನ ಬಾವಟೆಗುಡ್ಡೆ ಸ್ತಂಭದ ಮೇಲೆ ತಮ್ಮ ಪತಾಕೆಯನ್ನು ಹಾರಿಸಿದರು. ಕೊಡಗಿನ ಪುಟ್ಟಬಸಪ್ಪನನ್ನು ಬ್ರಿಟಿಷ್ ಸೈನ್ಯವು ಹಿಡಿದು ಮಂಗಳೂರಲ್ಲಿ ಗಲ್ಲಿಗೇರಿಸಿದರು. ಬೆಳ್ತಂಗಡಿ ತಾಲ್ಲೂಕಿನ ಬಂಗಾಡಿಯ ಬಂಗರಾಜಕುಮಾರನೂ ಚಳವಳಿಗಾರರೊಂದಿಗೆ ಸೇರಿದ್ದಕ್ಕಾಗಿ ಅವನನ್ನೂ ಗಲ್ಲಿಗೇರಿಸಿದರು. ಕೊಡಗಿನ ಗುಡ್ಡೆಮನೆ ಅಪ್ಪಯ್ಯನನ್ನು ಮಡಿಕೇರಿಯಲ್ಲಿ ಶೂಲಕ್ಕೇರಿಸಿದರು. ಕುರ್ತ ಮತ್ತು ಕುಡಿಯರಂಥಹ ಒಂದು ಚಳವಳಿಯು ಕನ್ನಡ ಕರಾವಳಿಯ ದಲಿತರ ಪರಾಕ್ರಮಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಅಪ್ರತಿಮ ಸಾಹಸಿಗರಾದ ಇವರಿಬ್ಬರನ್ನೂ ಅಮರ ಸುಳ್ಯ ಕದನದಲ್ಲಿ ಬ್ರಿಟಿಷರು ಗಲ್ಲಿಗೇರಿಸಿದರು.

1834ರಲ್ಲಿ ಬ್ರಿಟಿಷರು ಕೊಡಗನ್ನು ಎಲ್ಲಾ ದಿಕ್ಕುಗಳಿಂದಲೂ ಮುತ್ತಿಗೆ ಹಾಕಿದರು. ಅಂತೆಯೇ ದಕ್ಷಿಣ ಕನ್ನಡದ ಕಡೆಯಿಂದ ದಾಳಿ ಇಕ್ಕಿದ್ದ ಬ್ರಿಟಿಷರ ಸೈನ್ಯವನ್ನು ಅಮರ ಸುಳ್ಯ ಎಂಬಲ್ಲಿ ಕುರ್ತ ಮತ್ತು ಕುಡಿಯ ಎಂಬ ಸೇನಾನಿಗಳು ಸಮರ್ಥವಾಗಿ ತಡೆದು ಹಿಂದಕ್ಕಟ್ಟಿದರು. ಇಲ್ಲಿ ಸೋಲನ್ನಪ್ಪಿದ ಬ್ರಿಟಿಷ್ ಸೇನಾನಿಗಳು ಆಗ ಕೊಡಗಿನ ದಿವಾನರಾಗಿದ್ದ ಬೋಪಣ್ಣರೊಡನೆ ಒಳಸಂಚು ನಡೆಸಿ ಚಿಕ್ಕವೀರ ರಾಜೇಂದ್ರನ ಖೋಟಾ ನಿರೂಪವೊಂದು ಕುರ್ತ ಕುಡಿಯರಿಗೆ ಸಿಗುವಂತೆ ಮಾಡಿದರು. ಆದರಲ್ಲಿದ್ದಂತೆ ಈ ಸೇನಾನಿಗಳು ಬ್ರಿಟಿಷರಿಗೆ ಶರಣಾಗತರಾದರು ! ಒಡನೆ ಬ್ರಿಟಿಷರು ಅವರಿಬ್ಬರನ್ನು ಹಿಡಿದು ಗಲ್ಲಿಗೇರಿಸಿದರು. ಹೀಗೆ ಬ್ರಿಟಿಷರು ನಿರ್ನಾಮ ಮಾಡಿದರು.

## ಕಾಂಗ್ರೆಸ್ ಚಳುವಳಿಯ ಸಂದರ್ಭದಲ್ಲಿ:

ಕಾಂಗ್ರೆಸ್ ಚಳವಳಿಯ ಕಾಲದಲ್ಲಿ ಉಪ್ಪಿನ ಸತ್ಯಾಗ್ರಹದ ನಂತರ, ಅರಣ್ಯ ಸತ್ಯಾಗ್ರಹ, ವಿದೇಶಿ ಬಟ್ಟೆ ಮಾರುವ ಅಂಗಡಿಗಳಿಗೆ ತಡೆಕಾವಲು ಮತ್ತು ಸೇಂದಿಯ ಉತ್ಪಾದನೆ ಹಾಗೂ ಮಾರಾಟಗಳ ವಿರುದ್ಧ ಚಳವಳಿ ಪ್ರಾರಂಭವಾದವು. ಅರಣ್ಯದೊಳಗೆ ದುಡಿಯುತ್ತಿದ್ದ ದಲಿತರನ್ನೂ ಕಾಂಗ್ರೆಸಿಗರು ಬಳಸಿಕೊಂಡು ಸತ್ಯಾಗ್ರಹ ಮಾಡಿಸಿಕಾಯ್ದಿಟ್ಟ ಅರಣ್ಯ ಕಾನೂನನ್ನು ಮುರಿದು. ಉರುವಲು ಕಟ್ಟಿಗೆ ಹಾಗೂ ಹುಲ್ಲನ್ನು ಉಪಯೋಗಿಸಿಕೊಂಡರು. ಸ್ವದೇಶಿ ಬಟ್ಟೆಗೆ ಬೇಡಿಕೆಯಿಲ್ಲದೆ ನಷ್ಟ ಹೊಂದುತ್ತಿದ್ದಾಗ, ವಿದೇಶಿ ಬಟ್ಟೆ ಮಾರುವ ಅಂಗಡಿಗಳ ವಿರುದ್ಧ ಚಳವಳಿ ಅನಿವಾರ್ಯವಾಯಿತು. ಆದರೆ ಅದು ಪರಿಣಾಮಕಾರಿಯಾಗಲಿಲ್ಲ. ಚಳವಳಿಗಾರರನ್ನು ಬ್ರಿಟಿಷರು ಬಂಧಿಸಿದರು. ಸೇಂದಿ-ಸಾರಾಯಿಗಳ ಉತ್ಪಾದನೆ ಮತ್ತು ಮಾರಾಟಗಳ ವಿರುದ್ಧ ಹೂಡಿದ ಚಳವಳಿಯು ಏನೊಂದು ಪರಿಣಾಮವನ್ನೂ ಉಂಟುಮಾಡಲಿಲ್ಲ. ಅಂದು ಮಾಡಿದ ಚಳವಳಿಯು ಜಯ ಆಗುತ್ತಿದ್ದರೆ ಇಂದು ಅವುಗಳ ವಿರುದ್ಧ ಚಳವಳಿ ಮಾಡಬೇಕಾದ ಅಗತ್ಯವೇ ಇರುತ್ತಿರಲಿಲ್ಲ.

---

**ದಲಿತರನ್ನು ಕೇವಲ ಓಟಿನ ಗುತ್ತಿಗೆಯಾಗಿ, ಧರ್ಮದ ಮೆಟ್ಟಿಲಾಗಿ ಮಾತ್ರ ನೋಡುವ ಮೇಲುಜಾತಿ, ಮೇಲು ವರ್ಗದ ದಿಕ್ಕಿನಿಂದ ಮೂಡಿ ಬಂದ ಅಪರೂಪದ ವ್ಯಕ್ತಿತ್ವ ಕುದ್ಮಲ್ ರಂಗರಾವ್.**

**ಗೌಡ ಸಾರಸ್ವತ ಬ್ರಾಹ್ಮಣರಾದ ಇವರು ತಮ್ಮವರು ನೀಡಿದ ನಾನಾ ಹಿಂಸೆ ಕಿರುಕುಳ, ಬಹಿಷ್ಕಾರಕ್ಕೂ ಬಗ್ಗದೆ ದಲಿತರಲ್ಲಿ ಶಿಕ್ಷಣ ಸುಧಾರಣೆಗಾಗಿ ಬಹುವಾಗಿ ಶ್ರಮಿಸಿದರು.**

---

## ಕುದ್ಮಲು ರಂಗರಾವ್:

ಕಾಂಗ್ರೆಸ್ ಚಳವಳಿಯ ಸಂದರ್ಭ ಕಾರ್ನಾಡು ಸದಾಶಿವರಾಯರು ಕನ್ನಡ ಕರಾವಳಿಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1921ರಲ್ಲು ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿದರು. ಇದೇ ಕಾಲ ಘಟ್ಟದಲ್ಲಿ ಗೌಡ ಸಾರಸ್ವತ ಬ್ರಾಹ್ಮಣರಾದ ಕುದ್ಮಲುರಂಗರಾಯರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಸಂಸ್ಥೆ (ಡಿ.ಸಿ.ಎಂ.) ಯನ್ನು ಸ್ಥಾಪಿಸಿಕೊಂಡು ದಲಿತರ ಅಭಿವೃದ್ಧಿ ಕಾರ್ಯಗಳಿಗೆ ಶ್ರಮವಹಿಸಿದರು. ಆದರೆ ಇವರದು ಸಾಮಾಜಿಕ ಆಧ್ಯಾತ್ಮಿಕಹಾದಿ ಮತ್ತು ಸಾಕ್ಷಾತ್ಕಾರದ ಕಾಯಕವಾಯಿತು. ಪುರೋಹಿತಶಾಹಿ ಮೌಲ್ಯಗಳ ಹಿಡಿತದಿಂದ ಹೊರತುಪಡಿಸಿ ದಲಿತರ ಸ್ವಾಭಿಮಾನದ ಚಳವಳಿಯನ್ನಾಗಿ ರೂಪುಗೊಳಿಸಲು ಪೂರಕವಾಗಲಿಲ್ಲ. (ಹೆಚ್ಚಿನ ವಿವರಕ್ಕೆ ದಲಿತೋದ್ಧಾರಕ ಕುದ್ಮುಲು ರಂಗರಾವ್ ಜೀವನ ಚರಿತ್ರೆ ಪುಸ್ತಕ ನೋಡಿ.)

## ಸ್ವಾತಂತ್ರ್ಯಾನಂತರ:

ಭೂಮಾಲಿಕರು ಗೇಣಿದಾರರನ್ನು ಮನಬಂದಂತೆ ಭೂಮಿಯಿಂದ ಹೊರದೂಡುವುದನ್ನು ತಡೆಯಲು ಬ್ರಿಟಿಷ್‌ಸರ್ಕಾರವು 1954ರ ಮದ್ರಾಸ್ ಒಕ್ಕಲೆಬ್ಬಿಸುವುದರ ತಡೆ ಶಾಸನ ವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಾರಿಗೆ ತಂದಿತು. ಇದರಿಂದ ಗೇಣಿದಾರರಿಗೆ ಅನುಕೂಲವಾಯಿತು. ದಲಿತರಿಗೆ ಮಾತ್ರ ಈ ಶಾಸನ ಏನೂ ಅನುಕೂಲ ಮಾಡಿಲ್ಲ. 1951ರ ನಂತರ ಪಂಚವಾರ್ಷಿಕ ಯೋಜನೆಗಳ ತೀವ್ರ ಪರಿಣಾಮಕಾರಿ ಅನುಷ್ಠಾನದಿಂದಾಗಿ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು ಹೆಚ್ಚಲು ಸಹಾಯವಾಯಿತು. ಆದರೆ, ಮಹಾರಾಜರ ಆಳ್ವಿಕೆಯ ರುಚಿಗೆ ಒಗ್ಗಿಕೊಂಡಿದ್ದ ಅನೇಕರಿಗೆ ಹಿಂದುಳಿದ ಪ್ರದೇಶ ಮತ್ತು ದಲಿತ ಜನಗಳೊಂದಿಗೆ ಕೂಡುವುದು ಬೇಕಿರಲಿಲ್ಲ. ಅಲ್ಲದೆ ಈ ಹೊಸ ವ್ಯವಸ್ಥೆಯಲ್ಲಿ ತಮ್ಮತನವನ್ನು ತಾವು ಕಳೆದುಕೊಂಡು ಬಿಡಬಹುದೆಂಬ ಭಯ ಅವರಿಗಿತ್ತು.

1974ರಿಂದ ಭೂ ಮಸೂದೆ ಕಾನೂನು ಕಾರ್ಯರೂಪಕ್ಕೆ ಬಂದ ನಂತರದಲ್ಲಿ ಪುರೋಹಿತಶಾಹಿಗಳಾದ ಬ್ರಾಹ್ಮಣರು ಮತ್ತು ಜೈನರು ತಮ್ಮ ಭೂಮಿಗಳನ್ನು ಕಳಕೊಂಡರು. ಭೂಮಾಲೀಕರ ಮತ್ತು ಗೇಣಿದಾರರ ಸಂಬಂಧ ಕೊನೆಗೊಂಡಿತು. ದಲಿತರಿಗೆ ಈ ಕಾನೂನು ಪ್ರಯೋಜನವಾಗದೆ ಪಕ್ಷಪಾತವೇ ಆಗಿದೆ.

ಪೂರ್ಣ ವ್ಯವಸ್ಥೆಯ ಕುತಂತ್ರದಿಂದ ಹಿಂದುಳಿದ ಬಿಲ್ಲವರು, ಮಡಿವಾಲರು, ಕುಲಾಲ (ಕುಂಬಾರ) ರು ಮೊದಲಾದವರ ಬದುಕು ಕೂಡ ಆರ್ಥಿಕ ಸ್ಥಿತಿಗತಿಗಳಲ್ಲಿ ಪರಿಶಿಷ್ಟರ ಬದುಕಿನಂತೆಯೇ ಇತ್ತು. ಪುರೋಹಿತಶಾಹಿಗಳಿಂದ ಬಿಲ್ಲವರು 12 ಹೆಜ್ಜೆಗಳಷ್ಟೂ, ಪರಿಶಿಷ್ಟರು 30 ಹೆಜ್ಜೆಗಳಷ್ಟು ದೂರ ನಿಲ್ಲಬೇಕಾದ ಕ್ರಮವೊಂದಿತ್ತು. ಪರಿಶಿಷ್ಟರಮೇಲಿದ್ದ ಸಮಾಜದ ಈಕ್ರಮ ಮಾತ್ರ ಈಗಲೂ ಅಪ್ರಜ್ಞಾಪೂರ್ವಕವಾಗಿಯಾದರೂ ಅದು ಬಂದೇಬರುತ್ತದೆ.ಭೂಒಡೆತನ ಸಿಕ್ಕಿದ ನಂತರದಲ್ಲಿ ವ್ಯಾಪಾರ ಮತ್ತು ವಾಣಿಜ್ಯಗಳಲ್ಲಿ ಬಿಲ್ಲವರು ಮುಂದುವರಿದು ದಲಿತರನ್ನು ತುಳಿಯುತ್ತಿದ್ದಾರೆ ! ಕರಾವಳಿಯ ದಕ್ಷಿಣ ಜಿಲ್ಲೆಯಲ್ಲಿ ಈಗ ಒಂದನೇ ಶಕ್ತಿಯೆಂದರೆ ಬಿಲ್ಲವರು.

## ದಲಿತ ಸಂಘರ್ಷ ಸಮಿತಿಯ ಹುಟ್ಟು

(ದ. ಸಂ. ಸ.) ದಿಕ್ಕು ಹರಸುತ್ತಿದ್ದ ಅಸ್ಪೃಶ್ಯ ಜನಾಂಗವನ್ನು ಒಂದುಗೂಡಿಸಿದ್ದು ಸ್ವಾತಂತ್ರ್ಯನಂತರ ಬಂದ 1974 ಬೂಸಾ ಚಳಚಳಿ, ಬೂಸಾ ಚಳವಳಿ ಒಂದು ಕಾರಣವೇ ಹೊರತು ಕೇಂದ್ರಪ್ರೇರಕ ಶಕ್ತಿಯಲ್ಲ ಭದ್ರಾವತಿಯಲ್ಲಿ ಜರಗಿದ ಪ್ರಥಮ ಸಮಾವೇಶದಲ್ಲಿ ದಲಿತ ಚಿಂತನೆಗೆ ಅಂಬೇಡ್ಕರ್ ಸಿದ್ಧಾಂತ ಮತ್ತು ಹೋರಾಟದ ಕೇಂದ್ರ ಪ್ರೇರ ಶಕ್ತಿಯಾಯಿತು. ಅಸ್ಪೃಶ್ಯ ಜನಾಂಗಗಳಂತೆಯೇ ಇನ್ನೂ ಕೆಲವು ಆರ್ಥಿಕವಾಗಿ ಹಿಂದುಳಿದು, ತಮ್ಮ ಜಾತಿಯ ಹೆಸರು ಹೇಳಿಕೊಳ್ಳುವುದಕ್ಕೆ ಯಾರು ನಾಚಿಕೆಪಡುತ್ತಾರೋ ಅಂಥವರೆಲ್ಲರೂ ದಲಿತರೆಂಬ ಪದದಿಂದ ದ. ಸಂ. ಸ. ಮೊದಲಾಯಿತು, ನಂತರದಲ್ಲಿ ಕರ್ನಾಟಕದ ಮೂಲೆ ಮೂಲೆಗ

ಳಲ್ಲಿಯೂ ಕಾಲಿಡತೊಡಗಿತು. ಚಳವಳಿಗಳನ್ನು ಕೈಗೆತ್ತಿಕೊಂಡಿತು.

### ಸೋಮಶೇಖರ

1980-81ರಲ್ಲಿ ಕನ್ನಡ ಕರಾವಳಿಯ ಮಂಗಳೂರಲ್ಲಿ ದ. ಸಂ. ಸ. ಅಸ್ತಿತ್ವಕ್ಕೆ ಬರಲು ಸಕಲೇಶಪುರ ತಾಲೂಕಿನ ಹಾಡ್ಯಾ ಗ್ರಾಮದ ದಿ॥ ಜಿ. ಸೋಮಶೇಖರ್ ಕಾರಣರು. ಇವರ ಮೂಲತ ಬಿಲ್ಲವ ಕುಲದವರು. ತನ್ನ ಬದುಕಿನ ಉದ್ದಕ್ಕೂ ನೋವನ್ನುಂಡ ದಲಿತ. ಈ ವ್ಯಕ್ತಿಗೆ ಬೆಂಬಲ ನೀಡಿ ಪ್ರಾರಂಭದಲ್ಲಿ ಇಲ್ಲಿನ ಕೆಲವೇ ಮಂದಿ ಕಾರ್ಯಕರ್ತರು. ಅವ್ಕ ಎಡೆಬಿಡದ ಪ್ರಯತ್ನದಿಂದ, ದಲಿತ ಜನಾಂಗಳಿಗೆ ಅಂಬೇಡ್ಕರ್ ಸಿದ್ಧಾಂತ ಮತ್ತು ದ. ಸಂ. ಸ. ದ ಬೆಳವಣಿಗೆ ಕುರಿತು ಪ್ರಜ್ಞೆ ಮೂಡಿಸಲು ದ. ಸಂ. ಸ. ದ ನೇತೃತ್ವದಲ್ಲಿ ಕೆಲವೊಂದು ಕಾರ್ಯಕ್ರಮಗಳನ್ನು ರೂಪಿಸಿತು. ಇದರಿಂದ ಸಂಘಟನೆಗೆ ಶಕ್ತಿ ತುಂಬಿ ಬಲಬಂದಂತಾಗಿ, ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ಅಸ್ತಿತ್ವಕ್ಕೆ ಬಂದು, ಮೌಢ್ಯ ತುಂಬಿದ ಸಮಾಜವು ಬೆಳಕಿನತ್ತ ಕಣ್ಣು ಬಿಡುವ ಸಂಧಿಕಾಲವಾಯಿತು.

### ದ. ಸಂ. ಸಮಿತಿಯ ಹೋರಾಟಗಳು

ಪರಿಶಿಷ್ಟರ ಅಭಿವೃದ್ಧಿ ಕಾರ್ಯಗಳಿಗೆ ಇರಿಸಿದ ಶೇಕಡಾ 18%ರ ನಿಧಿಯು ವ್ಯವಸ್ಥಿತ ರೀತಿಯಲ್ಲಿ ವಿನಿಯೋಗಿಸದಿದ್ದ ಇಲ್ಲಿಯ ಮ ಹಾ ನ ಗ ರ ಪಾಲಿಕೆಯ ನೌಕರಶಾಹಿಗಳು ತಾಳಿದ ದಲಿತ ವಿರೋಧಿ ನೀತಿಯ ವಿರುದ್ಧ 1982ರ ಕಾಲಘಟ್ಟದ ಬಹಿರಂಗ ಖಂಡನಾ ಸಭೆಯಲ್ಲಿ ಸಾರ್ವಜನಿಕರ ಹಾಗೂ ಸರ್ಕಾರದ ಗಮನ ಸೆಳೆದಿತ್ತು. ದ. ಸಂ. ಸ.ದ ಪ್ರಾಥಮಿಕ ಕಾರ್ಯಕ್ರಮ ಆದಾಗಿತ್ತು. ಪೇಜಾವರದಲ್ಲಿ ಸುಮಾರು ಎರಡು ಎಕರೆ ಸರ್ಕಾರಿ ಸ್ಥಳವನ್ನು ಅಲ್ಲಿಯ ದ ಲಿ ತ ರಿ ಗೆ ಖಾಯಂ ಮಾಡುವಂತೆ 1982ರಲ್ಲಿ ಚಳವಳಿ ನಡೆಸಿತು. ಪರಿಣಾಮವಾಗಿ ಅಲ್ಲಿಯ ಭೂಮಾಲೀಕರು ಮತ್ತು ಸರ್ಕಾರವು ಬಲವಂತದಿಂದ ನಿವೇಶನ ಖಾಲಿ ಮಾಡುವ ತನ್ನ ದುರುದ್ದೇಶದ ನಿಲುವನ್ನು ಕೈ ಬಿ ಟ್ಟಿ ತು. ಅಲ್ಲಿಯ ದಲಿತರಿಗೆ ಸ್ವಾಭಿಮಾನದ ಪ್ರಜ್ಞೆ ಚಿಗುರಿಸಿದ ಪ್ರಥಮ ಚಳವಳಿಯಿದು.

ಅಂಗಡಿಗುಡ್ಡೆ ಕಾಲನಿಯ ಮಧ್ಯೆ ಮೂರು ಹೆಂಡ ಸಾರಾಯಿ ಅಂಗಡಿಗಳು ಇದ್ದವು. ಕುಡುಕರ ಹಾವಳಿಗಳಿಂದ ಹೆಣ್ಣು ಮಕ್ಕಳು, ಸಭ್ಯರು ತಲೆಎತ್ತಿ ನಡೆಯದ ಪರಿಸ್ಥಿತಿ ನಿರ್ಮಾಣವಾಗಿದ್ದಾಗ, ದ. ಸಂ. ಸ. ವು ಅನಿವಾರ್ಯವಾಗಿ ಪ್ರತಿಭಟನೆ ನಡೆಸಿದ ಪರಿಣಾಮವಾಗಿ ಹೆಂಡ–ಸಾರಾಯಿ ಅಂಗಡಿಗಳು, ಕಾ ಲು ಕಿ ತ್ತ ವು. 1979ರಲ್ಲಿ ಪರಿಶಿಷ್ಟರ ದರ್ಕಾಸ್ತು ಭೂಮಾರಾಟ ನಿಷೇಧ ಕಾಯಿದೆಯನ್ನು ಕರ್ನಾಟಕ ಸರ್ಕಾರ ಜಾರಿಗೊಳಿಸಿತು. ಈ ಕಾಯ್ದೆಯನ್ವಯ ವಿಭಾಗಾಧಿಕಾರಿಗಳು ಭೂಮಿ ಬಿಡಿಸಿಕೊಡುತ್ತಿದ್ದಂತೆಯೇ ಮತ್ತೊಂದೆಡೆ ಭೂಮಾಲೀಕರು, ರಾಜಕಾರಣಿಗಳು ಆದೇಶದ ವಿರುದ್ಧ ತಡೆಯಾಜ್ಞೆ ತಂದರು! ಹೀಗೆ ಹೈಕೋರ್ಟು ಕೊಟ್ಟ ಒಟ್ಟು ತ ಡೆ ಯಾ ಜ್ಞೆ 15,000ಕ್ಕೂ ಮಿಕ್ಕಿತು. ಹೈಕೋರ್ಟ್ ಮೆಟ್ಟಿಲತ್ತುವಷ್ಟು ಬಡವರಿಗೆ ಸಾಧ್ಯವಾಗಲ್ಲಲಿ. ಈ ಬಗ್ಗೆ ಕಿಂಚಿತ್ತೂ ಯೋಚನೆ ಮಾ ಡ ದೆ



ನೆರೆದವರನ್ನು ಹೊಸ ಅರಿವಿಗೆ ತೆರೆದುಕೊಳ್ಳುವಂತೆ ಮಾಡಿದ ಕಲಾಮಂಡಳಿ ತಂಡ.

## ಹೊಸ ಬದುಕಿನ ಹೆಜ್ಜೆ ತುಳಿದವರು

ಜಿಲ್ಲೆಯ ಹಲವು ಭಾಗಗಳಿಂದ ಬಂದಿದ್ದ ಸಹಸ್ರಾರು ದಲಿತರು ಇಲ್ಲಿನ ಕ್ರೀಡಾಂಗಣದಲ್ಲಿ ನೆರೆದು ಅಲ್ಲಿಂದ ನಗರದ ಮುಖ್ಯ ಬೀದಿಗಳಲ್ಲಿ ಹಾಯ್ದು ನೆಹರೂ ಮೈದಾನಕ್ಕೆ ಮೆರವಣಿಗೆಯಲ್ಲಿ ಬಂದು ತಲುಪಿದರು. ದಾರಿಯುದ್ದಕ್ಕೂ ಅಸಮತೆ ಪೋಷಿಸಿ—ಶೋಷಣೆ ಮುಂದುವರೆಸುತ್ತಿರುವ ಹಲವು ಅನಿಷ್ಟಗಳ ವಿರುದ್ಧದ ಘೋಷಣೆಗಳು ಮುಗಿಲು ಮುಟ್ಟುವಂತೆ ಮೊಳಗುತ್ತಿದ್ದವು. ಹೊಸ ಸಮತಾ ಸಮಾಜದ ಕನಸು ಸಾಕಾರಗೊಳಿಸುವ ಮಹತ್ವದ ಆಂದೋಲನಕ್ಕೆ ಕೈ ಬೀಸಿ ಕರೆಯುತ್ತಿದ್ದವು.

ಪುರಸಭೆಯ ಹಿಂಬಾಗದ ಮೈದಾನದಲ್ಲಿ ನೆರೆದ ಸಮಾವೇಶವನ್ನು ಉದ್ದೇಶಿಸಿ ದ. ಸಂ. ಸ. ರಾಜ್ಯ ಸಂಚಾಲಕ ಬಿ. ವಿ. ಚಂದ್ರಪ್ರಸಾದ ತ್ಯಾಗಿ, ಸಂಘಟನಾ ಸಂಚಾಲಕರಾದ ಎನ್. ವೆಂಕಟೇಶ್, ಎಂ ಡಿ. ಗಂಗಯ್ಯ, ಜಿಲ್ಲಾ ಸಂಚಾಲಕ ಡಿ. ಬಿ. ಸಾಲ್ಯಾನ್, ಸಾಹಿತಿ ಅರವಿಂದ ಮಾಲಗತ್ತಿ, "ಪಂಚಮ" ಸಂಪಾದಕ ಕೆ. ರಾಮಯ್ಯ ಮಾತನಾಡಿದರು.

ಸಮಾವೇಶದ ಮೊದಲಿಗೆ ಅರವಿಂದ ಮಾಲಗತ್ತಿ "ಸಮಾವೇಶ" ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು. ದಲಿತರನ್ನು ತುಳಿದು ಧೂಳಿಪಟ ಮಾಡಿರುವ ಅನೇಕ ಅಂಶಗಳತ್ತ ಭಾಷಣಕಾರರು ನೆರೆದಿದ್ದ ದಲಿತರ ಗಮನ ಸೆಳೆದರು. ತುಳಿತಕ್ಕೊಳಗಾದ ಜಾತಿ ಉಪಜಾತಿಗಳಾಗಿ ಹರಿದು ಹಂಚಿ ಹೋಗಿರುವ ದಲಿತ ಸಮುದಾಯ ಸಂಘಟಿತಗೊಂಡು ಮುಂಬರುವ ನಿರ್ಣಾಯಕ ಹೋರಾಟಕ್ಕೆ ಅಣಿಗೊಳ್ಳಬೇಕೆಂದು ಆಶಿಸಿದರು.

ಸಮಾರಂಭದಲ್ಲಿ ನಡೆದ ಇನ್ನೊಂದು ಅಪೂರ್ವ ಘಟನೆ ಮೂರು ಜೋಡಿ ಸರಳ ಮದುವೆ. ವರದಕ್ಷಿಣೆ, ದುಂದುಗಾರಿಕೆ, ಅವಮಾನದ ಪೌರೋಹಿತ್ಯ ಇತ್ಯಾದಿ ಕೊಳಕು ಸಂಪ್ರದಾಯಗಳೆನ್ನೆಲ್ಲಾ ಧಿಕ್ಕರಿಸಿ ಸರಸ್ವತಿ—ಜಯ, ಜಯಂತಿ—ದೇವಪ್ಪ, ಯಮುನೆ—ಎಂ. ಸಿ. ಕುಮಾರ್ ಅತ್ಯಂತ ಸರಳ ರೀತಿಯಲ್ಲಿ ಹಾರ ವಿನಿಮಯ ಮಾಡಿಕೊಂಡು ದಂಪತಿಗಳಾದರು. ಮದುವೆ ಎಂಬುದೇ ಅತ್ಯಂತ ಸಂಕಷ್ಟಗಳ. ಆರ್ಥಿಕ ಮಗ್ಗಟ್ಟಿನ, ಕೊಳಕು ಸಂಪ್ರದಾಯಗಳ ಹುತ್ತವಾಗಿರುವಾಗ ಇಲ್ಲಿ ನಡೆದ ಈ ಮದುವೆಗಳನ್ನು ಕಂಡು ನೆರೆದವರು ಹರ್ಷಗೊಂಡರು, ಮಧು ಮಕ್ಕಳಿಗೆ ಶುಭ ಹಾರೈಸಿದರು.

ಸಮಾವೇಶದ ಅಂತ್ಯದಲ್ಲಿ "ದಲಿತ ಕಲಾ ಮಂಡಳಿ" ಯಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. ತುಳು ಜನ ಭಾಷೆಯಲ್ಲೇ ರಚನೆಗೊಂಡ ಅನೇಕ ಹೋರಾಟದ ಹಾಡುಗಳನ್ನು ಕಲಾವಿದರು ಅಭಿನಯಕ್ಕೆ ಅಳವಡಿಸಿದ್ದರು. ಶಿಸ್ತು ಬದ್ಧವಾಗಿ ತರಪೇತು ಪಡೆದ ತಂಡದ ಕಲಾ ಪ್ರೌಢಿಮೆಗೆ, ಸಾಮಾಜಿಕ ಕಳಕಳಿಗೆ ಜನ ಸ್ಪಂದಿಸಿದರು. ಒಟ್ಟಾರೆ ಕನ್ನಡ ಕರಾವಳಿ ಜಿಲ್ಲೆಯಲ್ಲಿ ನಡೆದ ಮೊಟ್ಟ ಮೊದಲ ಐತಿಹಾಸಿಕ ಸಮಾವೇಶ ಇದು. ಇಂತಹ ಸಮಾವೇಶಕ್ಕೆ ಹಗಲಿರುಳೂ ದುಡಿದ ದ. ಸಂ. ಸ. ದ. ಪ್ರತಿ ಕಾರ್ಯ ಕರ್ತರು, ಹಿತೈಷಿಗಳು, ಭಾಗವಹಿಸಿದ ದಲಿತರೆಲ್ಲರೂ ಅಭಿನಂದನಾರ್ಹರು.

# ಮೀನುಗಾರರಿಗೆ ಸಾಮೂಹಿಕ ವಿಮಾ ಯೋಜನೆಯ ಪ್ರೀಮಿಯಂ ವಿನಾಯಿತಿ

## ಕಡಲಾಳದಿಂದ ಮತ್ಸ್ಯ ಸಂಪತ್ತನ್ನು ಆರಿಸಿ ತರುವ ಮೀನುಗಾರರಿಗೆ

## ಕರ್ನಾಟಕ ಸರಕಾರದ ಸಹಾಯ ಹಸ್ತ

ಕಡಲ ಮೀನುಗಾರಿಕೆಯಲ್ಲಿ ಅದರದ್ದೇ ಆದ ಸವಾಲು ಇದೆ, ಕಡಲ ಒಡಲು ವಿಪುಲ ಮೀನುಗಾರಿಕಾ ಸಂಪತ್ತಿನಿಂದ ಕೂಡಿದ್ದರೂ ಸಮುದ್ರವು ಪ್ರಕ್ಷುಬ್ಧವಾದಾಗ ದೋಣಿ, ಬಲೆ ಹಾಗೂ ಮೀನುಗಾರರ ಅಮೂಲ್ಯ ಜೀವವನ್ನು ಬಲಿ ತೆಗೆದುಕೊಳ್ಳುವುದು. ರಾತ್ರಿ ಹಗಲೆನ್ನದೆ ಪ್ರಕೃತಿಯ ಶಕ್ತಿಗಳನ್ನೆದುರಿಸಿ ಸಮುದ್ರದಾಚೆಗೆ ಪಯಣಿಸಿ ಮೀನುಗಾರಿಕೆಯಲ್ಲಿ ತೊಡಗುವ ಮೀನುಗಾರರ ಬಗ್ಗೆ ಕರ್ನಾಟಕ ಸರ್ಕಾರ ತನ್ನ ಕಾಳಜಿಯನ್ನು ವ್ಯಕ್ತಪಡಿಸುತ್ತಿದೆ. 1983–84ರಿಂದ ಜಾರಿಗೆ ತರಲಾಗಿರುವ ಒಳನಾಡು ಹಾಗೂ ಮೀನುಗಾರರ ವಿಮಾ ಯೋಜನೆಯಲ್ಲಿ ಮೀನುಗಾರರನ್ನು ಅವರ ಕಷ್ಟ ನಷ್ಟಗಳಿಂದ ಮುಕ್ತಗೊಳಿಸುತ್ತಿದೆ.

1987-88ರಲ್ಲಿ 60,000 ಮೀನುಗಾರರು ಈ ಯೋಜನೆಯ ವ್ಯಾಪ್ತಿಗೊಳಪಟ್ಟಿದ್ದು, ಅದಕ್ಕೆ ತುಂಬಲಾದ ಪ್ರೀಮಿಯಂ ಹಣ ರೂ. 5.40 ಲಕ್ಷ ಆಗಿರುತ್ತದೆ. ಕೇಂದ್ರ ಸರಕಾರ ಮತ್ತು ಕರ್ನಾಟಕ ರಾಜ್ಯ ಸರಕಾರದ ಸಹಭಾಗಿತ್ವದಲ್ಲಿ ವಿಮಾ ಕಂಪೆನಿಗೆ ಮೀನುಗಾರರ ಪರವಾಗಿ ಪ್ರತಿ ವರ್ಷ ತಲಾ ರೂ. 9ರಂತೆ ಪ್ರೀಮಿಯಂ ಹಣ ತುಂಬಲಾಗುತ್ತಿದೆ.

ಈ ಸಾಮಾಜಿಕ ವಿಮಾ ಯೋಜನೆಯಲ್ಲಿ ಆಕಸ್ಮಿಕ ಅಪಘಾತಕ್ಕೀಡಾಗಿ ಪೂರ್ಣ ಅಂಗವಿಕಲನಾದ ಮೀನುಗಾರನಿಗೆ ಅಥವಾ ಮೃತರಾದ ಮೀನುಗಾರರ ಅವಲಂಬಿಗಳಿಗೆ ರೂ. 15,000 ವಿಮಾ ಹಣವನ್ನು ನೀಡಲಾಗುವುದು. ಅಪೂರ್ಣ ಅಂಗವಿಕಲರಾದ ಮೀನುಗಾರರಿಗೆ ರೂ. 7,500 ವಿಮಾ ಹಣ ನೀಡಲಾಗುವುದು.

ಇದೀಗ ಮೀನುಗಾರರು ನಿಶ್ಚಿಂತರಾಗಿ ಮೀನು ಹಿಡಿಯಲು ಹೋಗಬಹುದು. ಆಕಸ್ಮಿಕವಾಗಿ ಏನಾದರೂ ಅನಾಹುತವಾದಲ್ಲಿ ಅವರ ಕುಟುಂಬಗಳು ದಾರಿಪಾಲಾಗಬೇಕಾಗಿಲ್ಲ. ಮೀನುಗಾರರ ಕಷ್ಟಕಾಲದಲ್ಲಿ ಈ ವಿಮಾ ಹಣ ಅವರಿಗೆ ಸಹಾಯ ನೀಡಿ ಅವರ ಜೀವದ ಭದ್ರತೆ ಒದಗಿಸುವುದು.

ಒಳನಾಡು ಹಾಗೂ ಕರಾವಳಿ ಮೀನುಗಾರಿಕಾ ಸಹಕಾರಿ ಸಂಘಗಳ ಸದಸ್ಯರಾಗಿರುವ ಎಲ್ಲಾ ಮೀನುಗಾರರು ಈ ಸಾಮೂಹಿಕ ವಿಮಾ ಯೋಜನೆಯಡಿಯಲ್ಲಿ ಪ್ರಯೋಜನ ಪಡೆಯಲು ಅರ್ಹರು.

**ಹೆಚ್ಚಿನ ಮಾಹಿತಿಯನ್ನು ಸಮೀಪದ ಮೀನುಗಾರಿಕಾ ಅಧಿಕಾರಿಗಳಿಂದ ಪಡೆಯಬಹುದು.**

**–ಕರ್ನಾಟಕ ವಾರ್ತೆ**

ಸರ್ಕಾರ ಕೈಕಟ್ಟಿ ಕುಳಿತುಕೊಂಡಿತು. ಈ ಅನ್ಯಾಯ ವನ್ನು ಪ್ರತಿಭಟಿಸಲು ರಾಜ್ಯ ಸಮಿತಿಗೆ ಬೆಂಬಲವಾಗಿ 1982ರಂದು ಚಳವಳಿ ನಡೆಸಿತು.

1986ರ ಡಿಸೆಂಬರ್ ತಿಂಗಳ ಸಮಯ. ಕೂಲಿ ಕಾರ್ಮಿಕ ಸೇಸಪ್ಪ ದೇವಾಡಿಗರ ಸ್ವತಂತ್ರ ಬದುಕನ್ನು ಸಹಿಸಲಾರದೆ ಜಾತಿವಾದಿ ಭೂಮಾಲೀಕರೆಲ್ಲ ಕಂದಾಯ ಅಧಿಕಾರಿಗಳಿಗೆ ಒತ್ತಾಯತಂದು, ಗುಡಿಸಲನ್ನು ಬಲ ವಂತವಾಗಿ ನೆಲಸಮಮಾಡಿ ದೇವಾಡಿಗರ ಬಡ ಸಂಸಾರ ವನ್ನು ಬೀದಿಪಾಲು ಮಾಡಿದರು ! ರಾಕ್ಷಸಿ ಕೃತ್ಯದ ಈ ಅನ್ಯಾಯವನ್ನು ಸಮಿತಿಯು ಪ್ರತಿಭಟಿಸಿ ಸಾರ್ವಜನಿ ಕರ ಹಾಗೂ ಸರ್ಕಾರದ ಗಮನ ಸೆಳೆದದ್ದು ಮಳವೂರಿ ನಿಂದ ಜಿಲ್ಲಾಧಿಕಾರಿ ಕಚೇರಿಗೆ ಸುಮಾರು 20 ಕಿ. ಮೀ. ಕಾಲ್ನಡಿಗೆ ಜಾಥಾ. ದ. ಸಂ. ಸ.ದೊಳಗೆ ಎಲ್ಲಾ ಬಡ ವರು ಇದ್ದಾರೆಂಬುದನ್ನು ಇಲ್ಲಿ ಸಾಬೀತು ಪಡಿಸಿದ್ದು ಇದೇ ಜಾತಾ ಪ್ರಕರಣದಲ್ಲಿ. ಭೂಮಾಲೀಕರ ಮನೆಗೆ ದೇವಾಡಿಗರು ಜೀತಕ್ಕೆ ಹೋಗದಿದ್ದುದೇ ಈ ಪ್ರಕರ ಣಕ್ಕೆ ಕಾರಣವಾದದ್ದು. ದೇವಾಡಿಗರಿಗೆ ಪುನರ್ವಸತಿ ಯನ್ನು ದ. ಸಂ. ಸ. ಕಲ್ಪಿಸಿಕೊಟ್ಟಿದೆ.

ಮಲ್ಪೆಯಲ್ಲಿ ಸ್ಥಳೀಯ ಶಾಸಕಿ ಮನೋರಮಾ ಮಧ್ವರಾಜ್ ಇವರ ಮನೆ ಮುಂದೆ ದ. ಸಂ. ಸ. ಚಳವಳಿ ನಡೆಸಿತು. ಚಳವಳಿ ನಡೆಸಿದ ಮರುದಿವಸ ದಿಂದಲೇ ಬಂದರೊಳಗೆ ದಲಿತ ಮೀನುಗಾರರೆಲ್ಲರಿಗೂ ಕೆಲಸಕ್ಕೆ ಬಹಿಷ್ಕಾರ ಹಾಕಿದರು. ! ದಲಿತ ಮಹಿಳೆಯ ರಿಗೆ ಮೀನು ಒಣಗಿಸಲು ಮಂಜೂರಾದ ಒಂದು ಎಕರೆ ಹತ್ತು ಸೆಂಟ್ಸ್ ಸ್ಥಳದ ಆಕ್ರಮಣ ತೆರವು ಮತ್ತು ಹಂಗಾಮಿ ನೆಲೆಯಲ್ಲಿ ದುಡಿಯುತ್ತಿದ್ದ ದಲಿತ ಯುವ ಕರು, ಯಾಂತ್ರೀಕೃತ ದೋಣಿಯನ್ನು ವಿಶೇಷ ಘಟಕ ಯೋಜನೆಯಿಂದ ಕೇಳಿ ಕೊಂಡಿದ್ದರೂ ಆದ್ಯತೆ ದೊರೆ ಯದಿದ್ದಾಗ ಬೇಡಿಕೆ ನೆರವೇರಿಸಲು ಈ ಚಳವಳಿಯ ಉದ್ದೇಶವಾಗಿತ್ತು. ದ. ಸಂ. ಸ.ವು ತೀವ್ರವಾಗಿ ಚಳ ವಳಿ ಮುಂದುವರಿಸಿದ ಕಾರಣ ಮತ್ತೆ ಎಂದಿನಂತೆ ಬಂದರೊಳಗೆ ಕೆಲಸ ದೊರಕಿದೆ. ಆದರೆ ಮಂಜೂರಾದ ಸ್ಥಳದ ಆಕ್ರಮಣದ ತೆರವು ಮಾಡಿಸಲು ರಾಜಕೀಯ ಹಾಗೂ ಸ್ಥಾಪಿತ ಹಿತಾಸಕ್ತಿಗಳ ಪ್ರಭಾವದಿಂದ ಮೀನ ಮೇಷ ಎಣಿಸುವಂತಾಗಿದೆ.

ಕಾರ್ಕಳ ಮತ್ತು ಬೆಳ್ತಂಗಡಿಗಳಲ್ಲಿ ನಡೆದ ಪೊಲೀಸ್ ದೌರ್ಜನ್ಯ, ಪುತ್ತೂರಿನ ಕೆಟಲ್ ಫಾರಂನಲ್ಲಿ ದಲಿತರಿ ಗಾದ ಅನ್ಯಾಯ, ಕಾಟಿಪಲ್ಲದಲ್ಲಿ ದಲಿತರ ಗುಡಿಸಲು ನೆಲಸಮ ಮತ್ತು ನಿವೇಶನ ಆಕ್ರಮ ಮಾರಾಟ, ಮಳ ವೂರಿನ ಸಾರ್ವಜನಿಕ ರಸ್ತೆ ತಡೆ ವಿರುದ್ಧ ಚಳವಳಿ ಜಿಲ್ಲಾ ಸಹಕಾರಿ ಬ್ಯಾಂಕು ಮತ್ತು ಲೋಕೋಪಯೋಗಿ ಇಲಾಖೆಯ ಮೀಸಲಾತಿ ವಿರೋಧಿ ನೀತಿ, ಕರ್ನಾಟಕ ಗೇರು ಅಭಿವೃದ್ಧಿ ನಿಗಮದ ದಲಿತ ವಿರೋಧಿ ನೀತಿ, ದಲಿತ ವಿದ್ಯಾರ್ಥಿಗಳ ನಿಲಯಕ್ಕೆ ಸಂಬಂಧಿಸಿದ "ಕ್ಯಾರಿ ಓವರ್" ನಿಯಮ ರದ್ಧತಿ. ದಲಿತ ಶಿಕ್ಷಕರ ಮುಂಬಡ್ತಿ ಮತ್ತು ವರ್ಗಾವಣೆಯಲ್ಲಿ ವಂಚನೆ ಇತ್ಯಾದಿ ಸಮಸ್ಯೆ ಗಳನ್ನು ದ. ಸಂ. ಸ. ಅಂಗಸಂಸ್ಥೆಯಾದ ದಲಿತ ನೌಕರರ ಒಕ್ಕೂಟ, ದಲಿತ ವಿಧ್ಯಾರ್ಥಿ ಒಕ್ಕೂಟ ಗಳು ಸೇರಿಕೊಂಡು ಕನ್ನಡ ಕರಾವಳಿಯ




ಎಲ್ಲ ಬಗೆಯ ಸಂಪ್ರದಾಯಗಳನ್ನು ಧಿಕ್ಕರಿಸಿ, "ಮದುವೆ" ಸುತ್ತ ಹಬ್ಬಿದ ಅನಿಷ್ಟಗಳ ಹುತ್ತವನ್ನು ಛಿದ್ರಗೊಳಿಸಿ ನಡೆದ ಮೂರು ಜೊತೆ ಸರಳ ಮದುವೆ ಕಾರ್ಯಕ್ರಮ. ಮಧುಮಕ್ಕಳಾದವರು ಎಡದಿಂದ ಬಲಕ್ಕೆ ಸರಸ್ವತಿ–ಜಯ, ಜಯಂತಿ–ದೇವಪ್ಪ, ಯಮುನ–ಎಂ. ಸಿ. ಕುಮಾರ್.

ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆಯಲ್ಲಿ ಒಟ್ಟು ದ. ಸಂ. ಸ. ಹಮ್ಮಿಕೊಂಡು ಬಂದ ಚಳವಳಿ ಗಳು.

ಹೀಗೆ ಅನೇಕ ಚಳವಳಿಗಳನ್ನು ಕೈಗೆತ್ತಿಕೊಂಡು ನಾನಾ ರೀತಿಯ ಏಳುಬೀಳುಗಳನ್ನು ಕಂಡಿದೆ. ಕೆಲವು ಸಂದರ್ಭಗಳಲ್ಲಿ ಬಂಧನಕ್ಕೂ ಒಳಗಾಗಿದೆ, ದ. ಸಂ. ಸ. ಕಾರ್ಯಕ್ರಮಗಳಲ್ಲಿ ಭಾಷಣಗಳು ಅಪಜಯ ಕಂಡಾಗ "ದಲಿತ ಕಲಾ ಮಂಡಳಿ" ತನ್ನ ಹೋರಾಟದ ಹಾಡು ಗಳಿಂದ ಕಾರ್ಯಕ್ರಮಗಳನ್ನು ಗೆದ್ದಿದೆ. 'ಪಂಚಾಯತ್ ರಾಜಾ ಮಸೂದೆ', 'ಬರ', 'ಜನತಾ ಪುರಾಣ', 'ಏಕ ಲವ್ಯ' ಹೀಗೆ ಹಲವಾರು ಸಾಮಾಜಿಕ ಕ್ರಾಂತಿಕಾರಿ ಬೀದಿ ನಾಟಕಗಳನ್ನು ಆಡಿ ಜನತೆಯನ್ನು ಮೌಢ್ಯದಿಂದ ಹೊರ ತರುವಲ್ಲಿ ರಂಗಭೂಮಿ ಚಳವಳಿಗೆ ಪೂರಕವಾಗಿ ದುಡಿದಿದೆ ಅಲ್ಲದೆ ದ. ಸಂ. ಸ.ವು ಇತರ ಪ್ರಗತಿಪರ ಸಂಘ ಸಂಸ್ಥೆಗಳ ಸಹಹೋರಾಟಗಳಲ್ಲೂ ಭಾಗವಹಿಸಿದೆ ಮತ್ತು ಅವುಗಳ ಸಹಕಾರದೊಂದಿಗೂ ಚಳವಳಿ ಮಾಡು ತ್ತಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ತುಳಿತಕ್ಕೊಳಪಟ್ಟು ಸರ್ವ ವಿಧಗಳಿಂದಲೂ ನೋವು, ಅಪಮಾನಗಳನ್ನುಂಡ ಕೆಳಸ್ತರದ ಜನಾಂಗಗಳು ತಮ್ಮ ಹಕ್ಕುಗಳ ಬಗ್ಗೆ ಪ್ರಶ್ನೆ ಬೆಳೆಸಿಕೊಳ್ಳುವುದೇ ಸ್ವಾಭಿಮಾನ. ಅಂದರೆ ದಲಿತರೊಳ ಗೆನೇ ಜಾತಿ ಅಸಮಾನತೆಯ ಮನಃಸ್ಥಿತಿ ಅಳಿಯದೆ ಉಳಿದಿರುವ ಒಂದು ಕಪ್ಪು ಚುಕ್ಕೆ. ಪರಿಶಿಷ್ಟ ಜಾತಿಯ ದಲಿತರೇ ಪರಿಶಿಷ್ಟ ಪಂಗಡದ ದಲಿತ (ಕೊರಗ)ರನ್ನು ಕೀಳಾಗಿ ಕಂಡು ಅಸ್ಪೃಶ್ಯತೆ ಆಚರಿಸುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಆರ್ಥಿಕ ಸ್ಥಿತಿಗಳಿಗೆ ಚಳವಳಿ ಎಷ್ಟು ಅಗತ್ಯವೋ ಅಷ್ಟೇ ಅಸಮಾನತೆ ಯನ್ನು ಆಚರಿಸುವ ಮನಃಸ್ಥಿತಿಯ ವಿರುದ್ಧವೂ ಚಳ ವಳಿ ಅಗತ್ಯವಿದೆ.

ಸ್ವಾಭಿಮಾನ ಚಳವಳಿಗಳು ತಲೆಯೆತ್ತಿ ಬೆಳೆಯಲು ಕೆಲವೊಂದು ತೊಡಕುಗಳಿವೆ. ಪುರೋಹಿತಶಾಹಿ ಮೌಲ್ಯದ ಪ್ರಾಬಲ್ಯ ಮತ್ತು ವಾಣಿಜ್ಯ ಮನೋ ಭಾವದ ಪ್ರಭಾವಗಳಿಂದ ಇಲ್ಲಿ ಯಾವುದೇ ಪ್ರಗತಿಪರ ಚಳವಳಿಗಳು ಬೆಳೆದು ಉಳಿಯಲು ಸಾಧ್ಯವಾಗ್ತಾಯಿಲ್ಲ.

(ಕೃಪೆ: "ಅಂಬೇಡ್ಕರ್ ಜನ್ಮದಿನ- ದಲಿತರ ಜಾಗೃತ ದಿನದಂದು ಬಿಡುಗಡೆಯಾದ ಸ್ಮರಣ ಸಂಚಿಕೆ ಸಮಾ ವೇಶ")

# ಎಲ್ಲೆಡೆ ಅರಳಿದ

ಭಾರತದ ದಲಿತರ ಬದುಕಿನ
ಗಳಿಂದ ಗಾಢಕತ್ತಲು ಕವಿದ
ಕೊಂಡೊಯ್ಯಬಲ್ಲ ಚೇತನವಾಗಿ
ಕುರುಡು' ತೋರುವ ಅಂಥ ಸ
ವಾಗಿ ಸಿಡಿದು ನಿಂತ ಡಾ॥ ಬಾ
ಜನ್ಮದಿನವನ್ನು 'ಕರ್ನಾಟಕ ರಾ
ವನ್ನಾಗಿ ಆಚರಿಸಲು ಕರೆ ನೀಡಿ

ಏಪ್ರಿಲ್ ತಿಂಗಳ ಸವಿರು ಬೆ
ನುಳಿಯ ಸಡಗರದಲ್ಲಿ ರಾಜ್ಯದ
'ದಸಂಸ' ಅಂಬೇಡ್ಕರ್ ಹ
ಹೋರಾಟದ ಬೀಜನೆಟ್ಟ ವರ
ರೂಪ ಇಲ್ಲಿದೆ.



### ಸೋಮವಾರಪೇಟೆ

14 ಏಪ್ರಿಲ್‌ನಂದು ಜೂನಿಯರ್ ಕಾಲೇಜಿನ ಬಳಿಯಿಂದ ಹೊರಟ ಮೆರವಣಿಗೆಯಲ್ಲಿ ಸುಮಾರು 150 ಜನ ಭಾಗವಹಿಸಿದ್ದರು. ಮೆರವಣಿಗೆಯ ನಂತರ ಸಂಪಿಗೆ ಕಟ್ಟೆ ಬಳಿ ಸಭೆ ಏರ್ಪಡಿಸಲಾಗಿತ್ತು. ಸಭೆಯ ಅಧ್ಯಕ್ಷತೆ ಗಣೇಶ್ ವಿರಾಜ್‌ಪೇಟೆ ವಹಿಸಿದ್ದರು. "ಅಂಬೇಡ್ಕರ್ ಕೇವಲ ದಲಿತರಿಗೆ ಮಾತ್ರ ನಾಯಕರಲ್ಲ, ಅವರ ಜನ್ಮ ದಿನಾಚರಣೆಯನ್ನು ಎಲ್ಲರೂ ಆಚರಿಸುವಂತಾಗಬೇಕು" ಎಂದು ಹೇಳಿದರು. ನಂತರ ಮಾತಾಡಿದ್ದು ಎಚ್. ಎ. ರಾಮಕುಮಾರ್. "ಮೀನಾಕ್ಷಿಪುರಂನಲ್ಲಿ ದಲಿತರು ಮತಾಂತರಗೊಂಡಾಗ ಎಲ್ಲ ಮಠಾಧಿಪತಿಗಳೂ ಅಲ್ಲಿಗೆ ಹೋಗಿ ಅವರನ್ನು ಮಾತೃ ಧರ್ಮಕ್ಕೆ ಹಿಂತಿರುಗಿಸುವಲ್ಲಿ ತೆಗೆದುಕೊಂಡ ಮುತುವರ್ಜಿ ಬೆಂಡಿಗೇರಿ ಘಟನೆ ನಡೆದಾಗ, ರಾಯಚೂರಿನ ಬಜಾರಪ್ಪನ ಕೊಲೆ ನಡೆದಾಗ, ದಿನವೂ ದಲಿತರ ಹತ್ಯೆ ನಡೆಯುತ್ತಿರುವಾಗ ಯಾಕೆ ಮೌನ ವಹಿಸಿದ್ದಾರೆ ಎಂದು ಪ್ರಶ್ನಿಸಿದರು. ಆಂದೋಲನದ ಉದ್ದೇಶವನ್ನು, ಅಂಬೇಡ್ಕರ್‌ರ ಹೋರಾಟದ ವಿಚಾರಗಳನ್ನು ಸಭೆಗೆ ತಿಳಿಸಿದವರು ಗುರಪ್ಪನವರು.

### ಪಾವಗಡ

ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ "ಜಾಗೃತಿ ದಿನ" ಆಚರಿಸಲಾಯಿತು. ತಾಲ್ಲೂಕು ಕೇಂದ್ರವಾದ ಪಾವಗಡದಲ್ಲಿ ಸುತ್ತಮುತ್ತ ಹಳ್ಳಿಗಳಿಂದ ಬಂದಿದ್ದ ಜನರು ಅಂಬೇಡ್ಕರ್‌ರ ಭಾವಚಿತ್ರದೊಂದಿಗೆ ಬೀದಿಗಳಲ್ಲಿ ಮೆರವಣಿಗೆ ಹೊರಟು ನಂತರ ಸಭೆ ನಡೆಸಲಾಯಿತು.. ಸಭೆಯಲ್ಲಿ ಮಾತನಾಡಿದವರು ಎಂ. ಜಯಣ್ಣ, ತಿಪ್ಪೇಸ್ವಾಮಿ, ಕಂಪಾಲಿ ರಾಮು.

ತಾಲ್ಲೂಕಿನ ಹಳ್ಳಿಗಳಾದ ಕೋಟಗುಡ್ಡ, ಕನ್ನವೇಡಿ ಹೊಸಹಳ್ಳಿ, ಮಂಳವಾಡ, ಸೂಲನಾಯಕನಹಳ್ಳಿಗಳಲ್ಲಿಯೂ ಮೆರವಣಿಗೆ, ಸಭೆಗಳನ್ನು ಏರ್ಪಡಿಸಲಾಗಿತ್ತು.

### ಉಂಡಿಗನಾಳು

ಅರಸೀಕೆರೆ ತಾಲ್ಲೂಕಿನ ಉಂಡಿಗನಾಳುವಿನಲ್ಲಿ ನಡೆದ ಜಾಗೃತಿ ದಿನಕ್ಕೆ ಸುತ್ತಲಿನ ಮುದ್ದಳ್ಳಿ, ತಿಮ್ಲಾಪುರ ಬಂದೂರು, ಕಲ್ಯಾಡಿ, ದೇಶಾಣಿಗಳಿಂದ ಅನೇಕರು ಬಂದಿದ್ದರು. ಮೆರವಣಿಗೆ ಮೊದಲು ಬಿದ್ದ ಮಳೆಯಿಂದ ಮುಂದವಾಗಿ ಬರುತ್ತಿದ್ದ ಮಣ್ಣಿನ ವಾಸನೆ ಹೀರುತ್ತಾ ಎಲ್ಲರೂ ಮೆರವಣಿಗೆಗೆ ಸಜ್ಜಾದರು. ಬೀದಿಗಳಲ್ಲಿ ಸಂಭ್ರಮದಿಂದ ಓಡಾಡಿದರು. ಆಮೇಲೆ ಬಸ್ ನಿಲ್ದಾಣದಲ್ಲಿ ಸಭೆ ಪ್ರಾರಂಭವಾದದ್ದು ಕ್ರಾಂತಿಗೀತೆಗಳೊಂದಿಗೆ.

ಸಭೆಯ ಅಧ್ಯಕ್ಷತೆ ವಹಿಸಿದ್ದ ಕೆ. ಗಂಗಮ್ಮ ತುಂಬ ಅರ್ಥಪೂರ್ಣವಾಗಿ ಮಾತನಾಡಿದರು. "ನಮ್ಮ ಹಿಂದಿನವರು ತಂಗಾಳಿಗಾಗಿ ಜೀವತೇದರು, ನಾವೀಗ ಅದನ್ನು ಬಿಟ್ಟು ವಿದ್ಯಾವಂತರಾಗಿ ಸ್ವಾಭಿಮಾನ ಬೆಳೆಸಿಕೊಳ್ಳಬೇಕಿದೆ, ಈ ದೇಶದಲ್ಲಿ ಅಕಸ್ಮಾತ್ ಅಂಬೇಡ್ಕರ್ ಹುಟ್ಟಿರದಿದ್ದರೆ ನಾವು ಹೀಗೆ ಸಭೆ ನಡೆಸೋದಾಗ್ಲಿ, ವೇದಿಕೆ ಮೇಲೆ ನಿಂತು ಮಾತಾಡೋದಾಗ್ಲಿ ಜಾತೀಯತೆಯಲ್ಲಿಕೊಳಿತಿರೋ ಈ ಸಮಾಜದಲ್ಲಿ ಸಾಧ್ಯವಾಗ್ತಿರಲಿಲ್ಲ ಎಂದು ಹೇಳಿ, ಮುಂದುವರಿದು ಹೆಣ್ಣಿನ ವಿಷಯಕ್ಕೆ ಬಂದಾಗ ಜಾತಿಗಳನ್ನು ಮೀರಿ ಹೆಣ್ಣು ಅನ್ಯಾಯಕ್ಕೆ ಒಳಗಾಗಿದ್ದಾಳೆ. ಇಂದಿಗೂ ಬೆತ್ತಲೆಸೇವೆ, ಓಕುಳಿ, ದೇವದಾಸಿ ಪದ್ಧತಿ, ಸತಿಪದ್ಧತಿ, ವರದಕ್ಷಿಣೆಗಳ ಹೆಸರಲ್ಲಿ ಹೆಣ್ಣನ್ನು ಶೋಷಿಸುತ್ತಲೇ ಬರುತ್ತಿದ್ದಾರೆ. ತನ್ನ ಮೇಲಿನ ಅನ್ಯಾಯವನ್ನು ತೊಲಗಿಸಿಕೊಳ್ಳಬೇಕಾದರೆ ಹೆಣ್ಣು ಸರಪಳಿ ಕಿತ್ತೊಗೆದು ಹೋರಾಟಕ್ಕೆ ಬರಬೇಕೆಂದು, ಸಭೆಯಲ್ಲಿ ಸೇರಿರುವ ತಾಯಂದಿರಿಗೆ ಕಿವಿ ಮಾತು ಹೇಳಿ; ಇತರರಿಗೆ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ, ಅದೇ ನೀವು ಅಂಬೇಡ್ಕರ್‌ರಿಗೆ ಸಲ್ಲಿಸುವ ನಿಜವಾದ ಗೌರವವಾಗುತ್ತದೆ ಎಂದರು.

ಗಂಗಮ್ಮನವರ ನಂತರ ಮಾತಾಡಿದ್ದು ಸಣ್ಣಯ್ಯ ನರಸಿಂಹಯ್ಯ, ಉಂಡಿಗನಾಳು ಸಂಚಾಲಕ ಚಿಕ್ಕಯ್ಯನವರು.

### ಮಂಡ್ಯ

ಜಾಗೃತಿ ದಿನದ ಅಂಗವಾಗಿ ರೈತ ಸಭಾಂಗಣದಲ್ಲಿ ನಡೆದ ಸಭೆಯಲ್ಲಿ ಮಲತಿನ್ನುವುದಕ್ಕಿಂತ ಮತಾಂತರ ಲೇಸೆ. ಚರ್ಚೆಯ ವಿಷಯ ಮಾತನಾಡಿದವರು ಬಂಜಗೆರೆ ಜಯಪ್ರಕಾಶ್, ದೇವನೂರು ಮಹಾದೇವ, ಪುಟ್ಟಣ್ಣಯ್ಯ, ಎನ್. ಮಹೇಶ್‌ರವರು.

### ಬಂಜಗೆರೆ ಜಯಪ್ರಕಾಶ್

ಮತಾಂತರ ಹೊಂದುವುದಕ್ಕಿಂತ ಮತರಹಿತವಾಗಿ ಬದುಕುವುದು ಲೇಸು, ಮತಾಂತರ ಹೊಂದುವ ಮೊದಲು ಸಂವಿಧಾನದ 366ನೇ ವಿಧಿಯನ್ನು ಬದಲಾವಣೆ ಮಾಡಲು ದಸಂಸ ಹೋರಾಟ ನಡೆಸಬೇಕು ಏಕೆಂದರೆ 366ನೇ ವಿಧಿಯನ್ವಯ ಮೀಸಲಾತಿ ಸೌಲಭ್ಯವಿರುವುದು ಹಿಂದೂ ಮತ್ತು ಸಿಖ್ ಧರ್ಮದವರಿಗೆ ಮಾತ್ರ.


ಚಿತ್ರ: ಎ. ಎನ್. ಮುಕುಂದ್

# ...ಾಗೃತಿ ದಿನದ ಹೂವು

ಶಾಕಿರಣವಾಗಿರುವ, ತಮ್ಮ ಪ್ರಖರ ಚಿಂತನೆ
ನಾಂಗವನ್ನು ವಿಮೋಚನೆಯ ಬೆಳಕಿನತ್ತ
ಮತಗಳ ಕೆಸರಿನ ಮಡುವಲ್ಲಿ ಸಿಕ್ಕು 'ಜಾಣ
ಸ್ವಾಭಿಮಾನದ ಹೋರಾಟದ ಮೊದಲ ಬೀಜ
ಬ ಅಂಬೇಡ್ಕರ್ ಅವರ ಈ ಸಲದ 97ನೇ
ಸಂಘರ್ಷ ಸಮಿತಿ' "ದಲಿತ ಜಾಗೃತಿ ದಿನ"

ಾಸಿಲು, ಆದಾಗ ಪ್ರಾರಂಭವಾದ. ಮೊದಲ
ಭಾಗಗಳಲ್ಲಿಯೂ ಅತ್ಯಂತ ಉತ್ಸಾಹದಲ್ಲಿ
ನನ್ನು ಜಾಗೃತಿ ದಿನವನ್ನಾಗಿ ಆಚರಿಸಿ
ಂಚಮ"ಕ್ಕೆ ಬಂದಿವೆ. ಅವುಗಳ ಸಂಕ್ಷಿಪ್ತ

**ಪುಟ್ಟಣ್ಣಯ್ಯ**

"ಹಿಂದೂ ಧರ್ಮ, ಧರ್ಮ ಎಂದು ಹೇಳಲು ಕೂಡ ನಾಚಿಕೆಯಾಗುವ ಮಟ್ಟಕ್ಕೆ ಇಳಿದಿದೆ"

**ಎನ್. ಮಹೇಶ್**

"ಈ ಚರ್ಚೆಯ ವಿಷಯ ಮಲತಿನ್ನುವುದಕ್ಕಿಂತ ಮತಾಂತರ ಲೇಸೆ ಎಂಬುದರ ಬದಲು ಮಲ್ಲತಿನ್ನುವುದಕ್ಕಿಂತ ಕೊಲೆ ಮಾಡುವುದು ಲೇಸು ಎಂದಿದ್ದರೆ ಚೆನ್ನಾಗಿತ್ತು.

**ದೇವನೂರು ಮಹಾದೇವ**

"ಧರ್ಮ ಇದೆ ಎಂಬುವುದು ನಂಬಲು ಆಗುವುದೇ ಇಲ್ಲ. ಅದರ ಬಗ್ಗೆ ಚರ್ಚೆ ಮಾಡುವುದು ಇಲ್ಲಿ ಸೂಕ್ತವಲ್ಲ. ಇಂದಿನ ಮೇಲು ಕೀಳು ತಪ್ಪು ಎಂಬ ಭಾವನೆ ಮಕ್ಕಳಿಗೆ ಬಾಲ್ಯದಲ್ಲಿ ಬರಬೇಕಾದರೆ ಪ್ರಾಥಮಿಕ ಶಿಕ್ಷಣದ ಹಂತದಿಂದ ಬಿಡುವಿನ ವೇಳೆಯಲ್ಲಿ ಶಾಲೆಯಲ್ಲಿ ಮಕ್ಕಳಿಗೆ ಚಪ್ಪಲಿ ಹೊಲೆಯುವ ಕೆಲಸವನ್ನು ಕಲಿಸಬೇಕು. ಇದರಿಂದ ಮಕ್ಕಳಿಗೆ ಬಾಲ್ಯದಲ್ಲಿಯೇ ಶಿಕ್ಷಣದ ಜತೆಗೆ ವೃತ್ತಿ ಶಿಕ್ಷಣದಲ್ಲಿ ತರಬೇತಿ ಮತ್ತು ವೃತ್ತಿಯ ಕೀಳರಿಮೆ ಭಾವನೆ ಹೋಗಲಾಡಿಸಲು ಸಾಧ್ಯ.



ಕಾರ್ಯಕ್ರಮದ ಕೊನೆಗೆ ಮತ್ತು ಪ್ರಾರಂಭದಲ್ಲಿ ಕಲಾ ಮಂಡಳಿಯಿಂದ ಹೋರಾಟದ ಹಾಡುಗಳನ್ನು ಹಾಡಲಾಯಿತು.

**ಚಿಕ್ಕಬಳ್ಳಾಪುರ**

ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ತಾಲ್ಲೂಕು ಶಾಖೆ ಹಮ್ಮಿಕೊಂಡಿತ್ತು. ಸುಮಾರು 70 ಕುಟುಂಬಗಳಿರುವ ಕಣತಹಳ್ಳಿಯಲ್ಲಿ ಬೆಳಗ್ಗೆ ಕಾರ್ಯಕ್ರಮ ನಡೆಯಿತು. ಸಭೆ ಮುಗಿವ ಮೊದಲು ಹಳ್ಳಿಯ ಮಹಿಳೆಯರು ಮತ್ತು ಗಂಡಸರು ಇನ್ನು ಹೆಂಡ ಕುಡಿಯುವುದಿಲ್ಲವೆಂದು ಪ್ರಮಾಣ ಮಾಡಿದರು.

ಸಂಜೆ ಬೊಮ್ಮನಹಳ್ಳಿಯಲ್ಲಿ ಕಾರ್ಯಕ್ರಮಕ್ಕೆ ಹಮಾ ರಾಮಚಂದ್ರ ಭಾಗವಹಿಸಿದ್ದರು. ಈ ಹಳ್ಳಿಯ ಹೆಂಗಸರೇ ಮುಂದೆ ನಿಂತು ಹೆಂಡ ಬಿಟ್ಟುಬಿಡುವುದಾಗಿ ಅವರಗಂಡಂದಿರ ಕೈಯಿಂದ ಪ್ರಮಾಣ ಮಾಡಿಸಿದರು.

ಕಾಡನಹಳ್ಳಿಯಲ್ಲಿಯೂ ಅಂದೇ ಕಾರ್ಯಕ್ರಮ ನಡೆಯಿತು. ಇದೇ ತಾಲ್ಲೂಕಿನ ಆಲೂರಿನಲ್ಲಿ ಹೆಂಡದ ಪ್ರಮಾಣದ ನಂತರ 4 ಬ್ಯಾರೆಲ್ ಹೆಂಡ ಕಡಿಮೆ ಬರುತ್ತಿದೆ.

**ಚಿಕ್ಕಮಗಳೂರು**

ಎರಡು ಸಾವಿರಕ್ಕೂ ಹೆಚ್ಚು ಸಂಖ್ಯೆಯಲ್ಲಿ ಸೇರಿದ್ದ ಜನರೊಂದಿಗೆ ಪ್ರಮುಖ ಬೀದಿಗಳಲ್ಲಿ ಹೊರಟ ಮೆರವಣಿಗೆ ಸಭೆ ನಡೆಸಿದ್ದು ಸಮಿತಿಯ ಕಛೇರಿಯಲ್ಲಿ. ಸಭೆಯಲ್ಲಿ ಅನೇಕ ವಿಚಾರಗಳು ಮಂಡಿತವಾದವು. ಮಾತನಾಡಿದವರು ಕಲ್ಲಯ್ಯ, ಮಾರಪ್ಪ, ರಾಧಾಕೃಷ್ಣ ಬಸವಣ್ಣ, ಎಂ. ಡಿ. ಗಂಗಯ್ಯ ಇದರೊಂದಿಗೆ ದಿನಾಂಕ 14ರಿಂದ 16ರ ವರೆಗೆ ತಾಲ್ಲೂಕು, ಹೋಬಳಿ ಕೇಂದ್ರಗಳಲ್ಲಿ ಜಾಗೃತಿ ದಿನ ಆಚರಿಸಲಾಯಿತು.

ಅಂಬೇಡ್ಕರ್ ಭಾವ ಚಿತ್ರದೊಂದಿಗೆ ದಲಿತ ಕಲಾ ಮಂಡಳಿಯ ತಂಡ ಹಾಡುಗಳನ್ನು ಹಾಡುತ್ತ ಸಂಜೆ



'ನಮ್ಮ ಕನಸಿನ ಬೀಜ ಇಲ್ಲೇ ನೆಟ್ಟೊ...'

4 ರ ವರೆಗೆ ಕಾರ್ಯಕ್ರಮ ನಗರದ ಕೆಲವೆಡೆ ನಡೆಸಿದರು. ಕಡೂರು ದಸಂಸ ವ್ಯವಸ್ಥೆ ಮಾಡಿದ್ದ ಸಭೆಯಲ್ಲಿ ಪತ್ರಕರ್ತ ವಾಸುರವರು ಅಂಬೇಡ್ಕರ್ ಭಾವ ಚಿತ್ರ ಅನಾವರಣ ಮಾಡಿದರು.

ಆಮೇಲೆ ತಂಡ ಬೀರೂರು, ತರೀಕೆರೆ, ಎನ್. ಆರ್ ಪುರ, ಕೊಪ್ಪ, ಶೃಂಗೇರಿ, ಜಯಪುರ, ಬಾಳೆ ಹೊನ್ನೂರು, ಕಳಗೂರು, ಬಣಗಲ್ ಮೂಡಗೆರೆ.... ಹೀಗೆ ಅನೇಕ ಕಡೆ ಮೂರು ದಿನಗಳಲ್ಲಿ ಸಂಚರಿಸಿತು. ಈ ಕಲಾಮೇಳದಿಂದ ಜಿಲ್ಲೆಯಲ್ಲಿ ಹೊಸ ಲವಲವಿಕೆಯೊಂದು ಈ ಮೂರು ದಿನಗಳಲ್ಲಿ ಹುಟ್ಟಿತ್ತು.

### ನಾಗಮಂಗಲ

ಟಿ. ಬಿ. ಸರ್ಕಲ್ ಒಳಿಯಿಂದ ಹಳ್ಳಿಗಳಿಂದ ಬಂದಿದ್ದ ಸುಮಾರು 500 ಜನ ದಲಿತರು ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಸಿದರು. ಚಳವಳಿಗಾರರು ಹೋಬಳಿಗೊಂದು ವಸತಿ ಶಾಲೆ"—"ಹೆಂಡಬೇಡ ಶಾಲೆಗಳನ್ನು ಕೊಡಿ" ಎಂಬ ಘೋಷಣೆಗಳನ್ನು ಘೋಷಿಸುತ್ತಿದ್ದರು.

ಸಭೆಯ ಅಧ್ಯಕ್ಷತೆ ಎಂ. ಬಿ. ಶ್ರೀನಿವಾಸ್ ವಹಿಸಿದ್ದರು. ಮುಖ್ಯ ಅತಿಥಿಗಳಾಗಿದ್ದ ಉಪನ್ಯಾಸಕ ಎಂ. ಮರಿಸ್ವಾಮಿಯವರು—ಪುರಾಣ ರಾಮಾಯಣ ವಿಶ್ಲೇಷಣೆ ಮಾಡುತ್ತ ಅವು ಹೇಗೆ ಮತಾಂಧತೆಗೆ ಸಹಕಾರಿಯಾಗಿವೆ ಎಂದು ತಿಳಿಸಿದರು.

ಇನ್ನೊಬ್ಬ ಅತಿಥಿಗಳಾಗಿದ್ದ ಕೆ. ಶಿವಣ್ಣನವರು "ದಲಿತರು ಅಂಬೇಡ್ಕರ್‌ರ ಸಭೆ ಸಮಾರಂಭಗಳಲ್ಲಿ ಭಾಗ ವಹಿಸುವುದು ಮುಖ್ಯವಲ್ಲ ಆದರ ಜೊತೆಗೆ ಅವರ ಹೋರಾಟದ ವಿಧಾನಗಳನ್ನು ಮೈಗೂಡಿಸಿಕೊಳ್ಳಬೇಕು, ಹೆಂಡ ಸೇವಿಸುವುದನ್ನು ಬಿಟ್ಟು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸಕೊಡಿಸುವಲ್ಲಿ ಮುಂದಾಗಬೇಕು ಎಂದರು. ನಂತರ ಪ್ರಕಾಶ್ ಹಾರೋಹಳ್ಳಿ ಮಾತನಾಡಿದರು.

### ಅರಕಲಗೂಡು

1–5–88 ರಂದು "ಜಾಗೃತಿ ದಿನ" ಆಚರಿಸಲಾಯಿತು. ಸಭೆಯಲ್ಲಿ ಪಚ್ಚಯ್ಯ, ಚಂದ್ರ ಪ್ರಸಾದ ತ್ಯಾಗಿ. ಬಿ. ಎಸ್. ದೇವರಾಜ್‌ರವರು ಮಾತನಾಡಿದರು. ಬೆಳಿಗ್ಗೆಯಿಂದ ಜಿನಿಯುವ ಮಳೆಯಲ್ಲಿಯೂ 1.500ಕ್ಕೂ ಹೆಚ್ಚು ಜನ ಸಭೆಗೆ ಭಾಗವಹಿಸಿದ್ದರು.



"ದಲಿತ ಸಂಘರ್ಷ ಸಮಿತಿ" ಒತ್ತಾಯಿಸುತ್ತಿರುವ 5 ಅಂಶಗಳ ಕುರಿತು ಪಚ್ಚಯ್ಯ, ದಲಿತರ ಸಾಮಾಜಿಕ ಸಮಸ್ಯೆಯ ಕುರಿತು ದೇವರಾಜ ಮಾತನಾಡಿದರು.

"ದಲಿತರ ಬೇಡಿಕೆಗಳು ಆಗಸ್ಟ್ ತಿಂಗಳೊಳಗೆ ನೆರವೇರದಿದ್ದರೆ ರಾಜ್ಯಮಟ್ಟದ ಹೋರಾಟ ನಡೆಸುವುದಾಗಿ" ಚಂದ್ರ ಪ್ರಸಾದ್ ತ್ಯಾಗಿ ನುಡಿದರು.

### ಜಾಗೃತಿ ದಿನ

ಜಾಗೃತಿ ದಿನದ ಅಂಗವಾಗಿ ಬಳ್ಳಾರಿನಗರದಲ್ಲಿ ಸಿಂಧನೂರು ಹಾಗೂ ತಾಲ್ಲೂಕಿನ ಬಳಗಾನೂರು ಗ್ರಾಮಗಳಲ್ಲಿ ಕಾರ್ಯಕ್ರಮ ನಡೆದಿವೆ. ಬಳ್ಳಾರಿಯಲ್ಲಿ ರಾಜ್ಯ ಸಂಚಾಲಕ ಚಂದ್ರ ಪ್ರಸಾದ ತ್ಯಾಗಿ ಭಾಗವಹಿಸಿದ್ದರು.

### ಗೌರಿಬಿದನೂರು

ತಾಲ್ಲೂಕಿನಲ್ಲಿ ಮೊದಲ ಕಾರ್ಯಕ್ರಮವಾದದ್ದು ಕುರುಮಲ ಕುಂಟೆಯಲ್ಲಿ. ಈ ಊರಿನ ವಿಶೇಷವೆಂದರೆ ಇಲ್ಲಿನ ಜಾತೀಯವಾದಿ ಭೂಮಾಲೀಕನೊಬ್ಬನ ವಿರುದ್ಧ ಸಂಘಟಿತರಾದ ಗ್ರಾಮದ ಎಲ್ಲ ಜನತೆಯೂ, ಮುಸ್ಲಿಮರೂ, ಸವರ್ಣೀಯರೂ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದರು.

ಹಾಗೆಯೇ ತಾಲ್ಲೂಕಿನ ಹುದುಗೂರು, ಗುಂಡಾಪುರ, ನಗರಗೆರೆ, ಹೊಸೂರು ಮಂಡಲ ಕೇಂದ್ರ, ಚಿಗಟಗೆರೆ, ನಾಗೇನಹಳ್ಳಿ, ದೊಡ್ಡ ಕುರುಗೋಡು ಗ್ರಾಮಗಳಲ್ಲಿ ಭಾವ ಚಿತ್ರ ಮೆರವಣಿಗೆ ಸಭೆಗಳನ್ನು ಏರ್ಪಡಿಸಲಾಗಿತ್ತು.

ಚಿತ್ರದಲ್ಲಿರುವವರು: ಎನ್. ವೆಂಕಟೇಶ್, ಕೆ. ರಾಮಯ್ಯ, ಡಿ. ಬಿ. ಸಾಲ್ಯಾನ್, ಚಂದ್ರಪ್ರಸಾದ್ ತ್ಯಾಗಿ, ಹರಿಹರಾನಂದ ಸ್ವಾಮಿ

**ಮಂಡ್ಯ**

ಜಿಲ್ಲೆಯ ಪಾಂಡವಪುರ, ಕೆ. ಆರ್. ಪೇಟೆ, ನಾಗ ಮಂಗಲ, ಕೆರಗೋಡುಗಳಲ್ಲಿ ಜಾಗೃತಿ ದಿನ ಆಚರಿಸ–ಲಾಯಿತು.

**ಹೆತ್ತೂರು**

ಸಕಲೇಶಪುರದ ಶಾಖೆಯು ಕಾರ್ಯಕ್ರಮ ಏರ್ಪಡಿಸಿತ್ತು. ಅಂತೆಯೇ ಅಂಬೇಡ್ಕರ್‌ರ 'ರಾಮಕೃಷ್ಣ-ಒಗಟುಗಳು' ಪುಸ್ತಕದ ಬಿಡುಗಡೆಯಿತ್ತು. ಸಭೆಗೆ ಪಿ. ಡೀಕಯ್ಯ, ವಿಜಯ ಮಹೇಶ್, ಎನ್. ಮಹೇಶ್, ಡಿ. ಸಿ. ನಿರ್ವಾಣಪ್ಪ, ಎಚ್. ಪಿ. ಲಕ್ಕಪ್ಪ ಭಾಗವಹಿಸಿದ್ದರು. ಕಾರ್ಯಕ್ರಮದ ಕೊನೆಯಲ್ಲಿ ದಲಿತ ಕಲಾ ಮಂಡಳಿಯಿಂದ ಕ್ರಾಂತಿ ಗೀತೆಗಳ ಕಾರ್ಯಕ್ರಮವಿತ್ತು.

**ಬೆಂಗಳೂರು**

ನಗರದಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾಗವಹಿಸಿ–ದವರು ಎಲ್. ಶಿವಲಿಂಗಯ್ಯ, ರಂಜಾನ್‌ದರ್ಗಾ, ಕವಿ ಸಿದ್ಧಲಿಂಗಯ್ಯ, ಆರ್. ಮುನಿಯಪ್ಪ, ಮುನಿಯಲ್ಲಪ್ಪ ಒ. ಶ್ರೀಧರ್, ಚಂದ್ರಶೇಖರ ಸ್ವಾಮಿ.

**ಸಿದ್ಧಲಿಂಗಯ್ಯ**

ದಲಿತ ಜಾಗೃತಿ ಎಂದರೆ ನಮ್ಮ ಮಾನಸಿಕ ಬದಲಾವಣೆ. ನಮ್ಮ ಮನಸ್ಸಲ್ಲಿ ಬಲವಾಗಿ ತುಂಬಿರುವ ಹಿಂದೂ ವಿಚಾರಗಳನ್ನು ಬಿಟ್ಟು ಹೊಸವಿಚಾರ ಅರಿಯಬೇಕು. ದೇವರನ್ನು ಪೂಜಿಸಲು ಬಿಡದ ಹಿಂದೂ ಧರ್ಮದ ದೇವರುಗಳೇ ನಮಗೆ ಬೇಡ. ತಾಯಿ ಮಗುವನ್ನು ಪ್ರೀತಿಯಿಂದ ನೋಡಿದಾಗ ಮಗು ತಾಯಿಯನ್ನು ಪ್ರೀತಿಯಿಂದ ಕಾಣುತ್ತದೆ. ಬೌದ್ಧಧರ್ಮ ತಿಳಿಯಬೇಕು.

**ರಮಜಾನ್ ದರ್ಗಾ**

"ಅಂಬೇಡ್ಕರ್ ಓದಿಗಿಂತಲೂ ಅವರ ಜಾಗೃತಿ ಆಂದೋಲನ ಮುಖ್ಯ. ದ. ಸಂ. ಸ ಇಡೀ ದೇಶದ ಬಡವರ ನೇತೃತ್ವ ವಹಿಸುವಂತಾಗಬೇಕು.



**ಎಲ್. ಶಿವಲಿಂಗಯ್ಯ**

ಎಲ್ಲಿಯವರೆಗೆ ನಾವು ಭ್ರಷ್ಟ ಸಮಾಜದಲ್ಲಿ ಇರು–ತ್ತೇವೊ ಅಲ್ಲಿಯವರೆಗೆ ನಾವು ಕೆಳಗೆ ಇರುತ್ತೇವೆ. ಇದರ ವಿರುದ್ಧ ಕೂಗೆತ್ತಬೇಕು. ಅಂಬೇಡ್ಕರ್ ಹೋರಾಟದ ರಥವನ್ನು ನಾವು ಮುಂದಕ್ಕೆಳೆದು ತರಬೇಕು.

**ವರದಿ ಕಳಿಸಿದವರು:**

ಸೋಮವಾರಪೇಟೆ: ಜಯಪ್ಪ ಹಾನಗಲ್, ಪಾವಗಡ: ಅಳ್ಳಪ್ಪ, ಉಂಡಿಗನಾಳು: ನರಸಿಂಹರಾಜು, ಮಂಡ್ಯ: ಕೆ. ಶಿವಣ್ಣ, ಹೆತ್ತೂರು: ಅಣ್ಣಯ್ಯ, ಚಿಕ್ಕಮಗಳೂರು: ಎಂ. ಡಿ. ಗಂಗಯ್ಯ, ಚಿಕ್ಕಬಳ್ಳಾಪುರ: ಸುಧಾ ವೆಂಕಟೇಶ್, ಗೌರಿಬಿದನೂರು: ನಾರಾಯಣ ಸ್ವಾಮಿ, ಬೆಂಗಳೂರು: ಚಂದ್ರಶೇಖರ ಸ್ವಾಮಿ.

## ಸಾಕ್ಷಿದಾರರು

ಈ ಮನೆಯೆಂದರೆ ನನಗೆ ಭೀತಿ!
ಊಟದ ಮನೆಯ ಪಾತ್ರೆಗಳ ಮಧ್ಯೆ
ಇಗೊ ಇಲ್ಲಿ
ಸಾಕ್ರಟೀಸನಿಗೆ ಕೊಟ್ಟ ಹೆಮ್ಲಕ್ ನಂಜುಬಟ್ಟಲು
ಇಲ್ಲಿ
ತಮ್ಮ ಯಜಮಾನರ ಹಡಗು ನಡೆಸುತ್ತಿದ್ದ
ರೋಮ್‌ನ ಗುಲಾಮರಿಗೆ ಕಟ್ಟಿದ ಸರಪಳಿ
ಅಲ್ಲಿ
ಪಿರಮಿಡ್ಡುಗಳಿಗಾಗಿ ಬಂಡೆ ಎತ್ತುತ್ತಿರುವಾಗ
ನಡುಗಿದ್ದ ಕೈಯಗಳ ಕೊಚ್ಚಿ ಹಾಕಿದ ಕೊಡಲಿ
ಇಲ್ಲಿ
ತಪ್ಪಿ ಸಗಿದ ಜೀತದಾಳುಗಳನ್ನು
ಜೀವಂತ ಬೇಯಿಸಲು
ಚೀನೀ ಜಮೀನುದಾರರು ಬಳಸಿದ ಕಡಾಯಿ
ಈ ಹಗ್ಗದಿಂದಲೇ
ಸ್ಪೇನ್‌ನ ಧರ್ಮ ವಿರೋಧಿಗಳನ್ನು ಹಡೆಮರಕ್ಕೆ ಕಟ್ಟಿ
ಜೀವಂತ ಸುಟ್ಟದ್ದು
ಈ ಗಂತಿಯಿಂದಲೇ
ಯಹೂದ್ಯ ಮಕ್ಕಳುಗಳನ್ನು
ಬಕ್‌ನ್ ವಾಲ್ಡ್‌ನ ಇಟ್ಟಿಗೆ ಗೂಡುಗಳಿಗಟ್ಟಿದ್ದು
ಈ ತುಟಿಯಿಂದಲೇ
ಯಹೂದ್ಯ ಮಕ್ಕಳುಗಳನ್ನು
ಬಿಳಿಯ ಜನ ಕರಿಯರ ಬೀಜ ಒಡೆದದ್ದು
ಈ ಚಿಂದಿಗಳನ್ನೇ
ಜಮೀನುದಾರರು ಸಂತಾಲ ಬಾಲೆಯರ ಬಾಯಲ್ಲಿ
ತುರುಕಿದ್ದು
ಈ ರಕ್ತದೆಲ್ಲಿರುವ ಕತ್ತಿಯಲ್ಲೇ
ಭಾರತ ಹಳ್ಳಿ ಹಳ್ಳಿಯ ತರುಣ ಕಣ್ಣನ್ನು ಕಿತ್ತದ್ದು
ಆದರೆ, ಇಲ್ಲೇ, ಈ ಮನೆಯಾಚೆ
ಹೊಸ ಮಣ್ಣನೆಬ್ಬುವ ಈತ
ಸಾವಿರ ವರ್ಷಗಳ ಚಿತ್ರಹಿಂಸೆಗೂ ಸಾಯದ ಶಕ್ತಿವಂತ
ತಲೆಯೆತ್ತಿದ್ದಾನೆ ಎಲ್ಲ ಅಡ್ಡಿಗಳೆದುರು
ಸದಾ ಸೆಣಸುತ್ತ,
ಸದಾ ಮುನ್ನಡೆಯುತ್ತ.

ಮಲಯಾಳಂ ಮೂಲ: **ಸಚ್ಚಿದಾನಂದ**

ಕನ್ನಡಕ್ಕೆ: **ಶಿವಪ್ರಕಾಶ**

# ಚಿಂತನೆಗೆ ತೊಡಗಿಸಿದ ಈಸೂರು ಶಿಬಿರ

**ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರಿಗೆ ಸಂಘಟನೆ, ರಾಜಕೀಯ ವಿದ್ಯಮಾನದ ತಾಲನಿಕ ಅಧ್ಯಯನ, ಹಾಗೂ ಸಂಘಟನೆ ನಡೆದು ಬಂದ ದಾರಿಗಳ ಕುರಿತು ತಿಳುವಳಿಕೆ ನೀಡಲು ಕಳೆದ ತಿಂಗಳು ದಿನಾಂಕ 3 ರಿಂದ ಐದು ದಿನಗಳ ಕಾಲ ಈಸೂರಿನಲ್ಲಿ ಶಿಬಿರವನ್ನೇರ್ಪಡಿಸಿದ್ದರು. ಅನೇಕ ಚಿಂತಕರು ದಸಂಸದ ಕಾರ್ಯಕರ್ತರನ್ನುದ್ದೇಶಿಸಿ ಈ ಶಿಬಿರದಲ್ಲಿ ಪ್ರಬಂಧ ಮಂಡಿಸಿದರು.**

**ಶಿಬಿರದಲ್ಲಿ ಪಾಲ್ಗೊಂಡ ಅಣ್ಣಯ್ಯ ಹೆತ್ತೂರರವರು ಅದನ್ನು ವರದಿ ಮಾಡಿದ್ದಾರೆ.**

**ವಿಷಯ: ಇಂಡಿಯಾದ ಇತಿಹಾಸದಲ್ಲಿ ನಡೆದ ಸಾಮಾಜಿಕ ಹೋರಾಟಗಳು**

**ಉಪನ್ಯಾಸಕರು: ಬಿ. ಗಂಗಾಧರ ಮೂರ್ತಿ**

ಉದ್ದಾಲಿಕ, ಚಾರ್ವಾಕ, ಬುದ್ಧ, ಬಸವಣ್ಣ, ರಾಜ ರಾಮ್ ಮೋಹನ್‌ರಾಯ್, ಕೇರಳದ ನಾರಾಯಣ ಗುರು, ಸಿ. ವಿ. ರಾ ಮ ಸ್ವಾ ಮಿ ಪೆ ರಿ ಯಾ ರ್, ಜ್ಯೋತಿಬಾಫುಲೆ, ಅಂಬೇಡ್ಕರ್, ಗಾಂಧಿ ; ವಚನ ಕಾರರು, ವಚನ ಸಾಹಿತ್ಯ ಮುಂತಾದ 20ನೇ ಶತಮಾನದ ಇಲ್ಲಿಯವರೆಗೂ ಇಂಡಿಯಾದ ಇತಿಹಾಸದಲ್ಲಿ ನಡೆದ ಸಾಮಾಜಿಕ ಹೋರಾಟಗಳನ್ನು (ಭೌತವಾದಿ ತತ್ವಶಾಸ್ತ್ರದ ಹಿನ್ನೆಲೆಯನ್ನು) ಅಂಕಿ ಅಂಶಗಳ ಉದಾಹರಣೆ ಸಮೇತವಾಗಿ ಸ್ಪಷ್ಟವಾದ ಉಪನ್ಯಾಸ ನೀಡಿ, ವಿದ್ಯಾರ್ಥಿಗಳು, ದ. ಸಂ. ಸ. ಕಾರ್ಯಕರ್ತರುಗಳು ಚರಿತ್ರೆಯನ್ನು ಬಹಳ ಚೆನ್ನಾಗಿ ಅಧ್ಯಯನ ಮಾಡಿ ಚರ್ಚೆಗೊಳಪಡಿಸಿಕೊಂಡು ಹೋರಾಟಕ್ಕೆ ಒಳ್ಳೆಯ ಮಾರ್ಗ ಕಂಡುಕೊಳ್ಳಬೇಕೆಂದರು.

17ನೇ ತಾರೀಕಿನಿಂದ ತಾಲೂಕು ಮಾತ್ರ ವರದಿ ತರಲಾತಗಿತ್ತು. ವರದಿಯಲ್ಲಿ ಆಯಾ ತಾಲೂಕಿನ ಸಂಘಟನೆಯ ಪ್ರಾರಂಭ, ಬೆಳವಣಿಗೆ, ದಲಿತರ ಸಮಸ್ಯೆಗಳು, ಹೋರಾಟ, ದಲಿತರ ಅಭಿವೃದ್ಧಿ, ಸ್ಥಳದ ಭೌಗೋಳಿಕ ಜನಜೀವನ ಎಂತು ? ಏಕೆ ? ಮುಂತಾಗಿ ಇತರೆ ಅಂಕಿ ಅಂಶಗಳನ್ನು ವರದಿಯಲ್ಲಿ ತರಲಾಗಿದ್ದು, ಸಭೆಯಲ್ಲಿ [illegible] ಚರ್ಚೆ ನಡೆಸಿ ಉತ್ತರ ಕಂಡುಕೊಳ್ಳಲಾಯಿತು.

**4. 5.88 ರಂದು ಬೆಳಿಗ್ಗೆ**

**ವಿಷಯ : ದಲಿತರು ಮತ್ತು ಇತಿಹಾಸ**

**ಉಪನ್ಯಾಸಕರು : ಅಳ್ಳಪ್ಪ ಪಾವಗಡ**

ದ್ರಾವಿಡರು, ಆರ್ಯರು ಇವರ ಮಧ್ಯೆ ನಡೆದ ಸಾಮಾಜಿಕ, ಆರ್ಥಿಕ ಘರ್ಷಣೆ, ಇವರುಗಳ ಇಲ್ಲಿನ ವರೆಗಿನ ಸ್ಥಿತಿಗತಿಗಳು, ಬೌದ್ಧ ಧರ್ಮದ ಉಗಮ, ಭಾರತದಲ್ಲಿ ಬೌದ್ಧ ಧರ್ಮದ ಕ್ಷೀಣಿಸುವಿಕೆಗೆ ಕಾರಣ, ಗ್ರೀಕರ ಕಾಲದಲ್ಲಿ ದಲಿತರು, ಭಾರತದಲ್ಲಿ ಮುಸ್ಲಿಂರ ಆಳ್ವಿಕೆ, ಬ್ರಿಟಿಷರ ಆಳ್ವಿಕೆ, ಧರ್ಮ ಪ್ರಚಾರಕ್ಕಾಗಿ ಬಂದ ಕ್ರಿಶ್ಚಿಯನ್ನರ ಕಾಲ, ಇತಿಹಾಸದಲ್ಲಿ ಈ ಕಾಲಗಳಲ್ಲಿಯ ಶೈಕ್ಷಣಿಕ ಮತ್ತು ರಾಜಕೀಯ ವ್ಯವಸ್ಥೆ, ಇವೆಗಳೆಲ್ಲದರ ಪ್ರಾರಂಭದಿಂದ 19ನೇ ಶತಮಾನದ ವರೆಗಿನ ವಸ್ತುಸ್ಥಿತಿ. ಇದರಲ್ಲಿ ದಲಿತರ ಸ್ಥಿತಿಗತಿಗಳನ್ನು ವಿವರಿಸಿದರು.

**ಮಧ್ಯಾಹ್ನ**

**ವಿಷಯ : ಚಾತುರ್ವರ್ಣ**

**ಉಪನ್ಯಾಸಕರು : ವೆಂಕಟೇಶ್ ಎನ್.**

1. ಬ್ರಾಹ್ಮಣ 2. ಕ್ಷತ್ರಿಯ 3. ವೈಶ್ಯ 4. ಶೂದ್ರ, ಎಂಬ ವರ್ಣಗಳನ್ನು ವಿವರಿಸಿ ಮಹಾರಾಷ್ಟ್ರದಲ್ಲಿ ಶಿವಾಮಹಾರಾಜರ ಕಾಲದಲ್ಲಿ ಹೊರ ದೇಶದಿಂದ ಭಾರತಕ್ಕೆ ಬಂದಿದ್ದ ಸಾಹಿತಿಯೊಬ್ಬರ ಸಾಹಿತ್ಯದಲ್ಲಿ—ಭಾರತದಲ್ಲಿ ಕ್ರಿಸ್ತ ಪೂರ್ವ 400ರಲ್ಲಿ ಅಸ್ಪೃಶ್ಯತೆ ಇತ್ತು ಎಂದು ಕಂಡು ಬಂದಿದೆಯೆಂದು ಹೇಳುತ್ತಾ— 1. ಅಸ್ಪೃಶ್ಯರು ಯಾರು ? 2. ಅಸ್ಪೃಶ್ಯತೆ ಚಾರಿತ್ರಿಕವಾಗಿ ಬೆಳೆದು ಬಂದ ರೀತಿ ಹೇಗೆ ? 3. ಅಸ್ಪೃಶ್ಯರು ಮೂಲ ನಿವಾಸಿಗಳೇ ? 4. ಅಸ್ಪೃಶ್ಯತೆ ಪ್ರಪಂಚದ ಇತರೆ ದೇಶಗಳಲ್ಲಿಯೂ ಇದೆಯೇ ? 5. ಅಸ್ಪೃಶ್ಯತೆಯ ಕಾಲ ಘಟ್ಟ ಯಾವುದು ? ಎಂಬ ವಿಷಯಗಳನ್ನು ವಿವರಿಸಿದರು. ಚತುರ್ವರ್ಣ ಸಿದ್ಧಾಂತದ ಪ್ರಕಾರ ದಲಿತರಿಗಿದ್ದ 52 ಹಕ್ಕುಗಳನ್ನು ವಿವರಿಸಿ ವಿಶ್ಲೇಷಣೆ ಮಾಡಿ ಮಾತನಾಡಿದರು.

**5.5.1988 ರ.ದು ಬೆಳಿಗ್ಗೆ**

**ವಿಷಯ : ಸಂಘಟನೆಯ ನ್ಯೂನತೆಗಳು**

**ಉಪನ್ಯಾಸಕರು : ವೆಂಕಟೇಶ್ ಎನ್.**

1. ವಿಚಾರ ಮತ್ತು ಆಚರಣೆ 2. ಬೌದ್ಧಿಕ ದೌರ್ಬಲ್ಯ 3. ಆಂತರಿಕ ಪ್ರಜಾಸತ್ತೆ 4. ಸ್ವವಿಮರ್ಶೆ ಮತ್ತು ವಿಮರ್ಶೆ 5. ಸಾಮಾನ್ಯದಿಂದ ನಿರ್ದಿಷ್ಟದ ಕಡೆಗೆ 6. ನಿರ್ದಿಷ್ಟದಿಂದ ಸಾಮಾನ್ಯದ ಕಡೆಗೆ 7. ಕಾರ್ಯಕರ್ತರನ್ನು ತಯಾರು ಮಾಡುವ ವಿಧಾನ 8. ದೊಡ್ಡ ಶತ್ರು ವಿಗಿಂತ ಕಡಿಮೆ ಶತ್ರುಲೇಸು 9. ಜನತೆಯಲ್ಲಿನ ವೈರುಧ್ಯತೆಗಳು— 1. ಆಂತರಿಕ ವೈರುಧ್ಯಗಳು 2. ಬಾಹ್ಯಯ ವೈರುಧ್ಯಗಳು ಇವರುಗಳ ಬಗ್ಗೆ ವಿವರಾತ್ಮಕವಾದ ವಿಶ್ಲೇಷಣೆ ಮಾಡಿದರು.

**ಮಧ್ಯಾಹ್ನ**

**ವಿಷಯ : ಅಂಬೇಡ್ಕರ್‌ರವರ ಐತಿಹಾಸಿಕ ಹೋರಾಟಗಳು**

**ಉಪನ್ಯಾಸಕರು :**

**ಹೆಚ್. ಎಂ. ರುದ್ರಸ್ವಾಮಿ**

ಅಂಬೇಡ್ಕರ್ ಬದುಕಿನ ಭಾಗಗಳನ್ನು ಒಂದೊಂದಾಗಿ ಕಪ್ಪು ಹಲಗೆಯ ಮೇಲೆ ವಿವರವಾಗಿ ಬರೆದು, ಅಂಕಿ ಅಂಶಗಳೊಂದಿಗೆ ವಿವರಿಸಿ, ಅಂಬೇಡ್ಕರರು ಸಂದರ್ಭಕ್ಕನುಸಾರವಾಗಿ ತನ್ನ ಚಳುವಳಿಯ ದಿಕ್ಕನ್ನು ಬದಲಾಯಿಸಿಕೊಂಡಿದ್ದಾರೆಂದರು. 1. ಸಾಮಾಜಿಕವಾಗಿ 2. ಧಾರ್ಮಿಕವಾಗಿ 3. ಶೈಕ್ಷಣಿಕವಾಗಿ 4. ಆರ್ಥಿಕವಾಗಿ 5. ರಾಜಕೀಯವಾಗಿ ; ದಲಿತರ ಅಭಿವೃದ್ಧಿಗಾಗಿ ಬ್ರಿಟಿಷ್ ಸರಕಾರದ ವಿರುದ್ಧ ಹೋರಾಟ, ಹಿಂದೂ ಧರ್ಮದ ವಿರುದ್ಧ ಹೋರಾಟ, ವತನ ಪದ್ಧತಿ ವಿರುದ್ಧ ಹೋರಾಟ, ಭಾರತಕ್ಕೆ ಬಂದ ಬ್ರಿಟಿಷ್ ಕಮೀಷನ್‌ರೊಡನೆ ಚರ್ಚಿಸಿ ದಲಿತರಿಗೆ ಹಕ್ಕು ದಾಖಲಾಯಿಸಿ ನ್ಯಾಯ ಪಡೆಯುವಿಕೆ, ಸ್ವಾತಂತ್ರ್ಯ ಚಳುವಳಿಯಲ್ಲಿ ಅಂಬೇಡ್ಕರರ ಪಾತ್ರ ; ಕಾಂಗ್ರೆಸ್ ವಿರುದ್ಧ ಹೋರಾಟ, ಗಾಂಧಿಯೊಡನೆ ಹಣಾಹಣಿ, ತೆರದ ಪತ್ರಿಕೆಗಳು, ಬರೆಯುತ್ತಿದ್ದ

ದೇಖನಗಳು, ಕಟ್ಟದ ಸಂಘಟನೆಗಳು, ವಿಷಯಗಳ ಬಗ್ಗೆ ವಿಶ್ಲೇಷಣೆ ಮಾಡಿದರು.

**6. 5. 1988ರಂದು ಬೆಳಿಗ್ಗೆ**

**ವಿಷಯ : ಜಾತಿಪದ್ಧತಿಯ ಹುಟ್ಟು ಬೆಳವಣಿಗೆ ಹಾಗೂ ರಾಜ ಪಕ್ಷಗಳ ವಿಶ್ಲೇಷಣೆ.**

**ಉಪನ್ಯಾಸಕರು : ರಂಜಾನ್ ದರ್ಗಾ**

ಜಾತಿ ಪದ್ಧತಿಯನ್ನು ವಿವರಿಸಿ, ವರ್ಗಗಳಾಗಿ ವಿಂಗಡಿಸಿ. ಮೇಲ್ವರ್ಗದಲ್ಲಿ ಬರುವ ಮೇಲುಜಾತಿ ಶ್ರೀಮಂತರಿಗೂ, ಕೆಳಜಾತಿ ಶ್ರೀಮಂತರಿಗೂ ; ಆರ್ಥಿಕ ವಾದ, ಶೈಕ್ಷಣಿಕವಾದ, ಸಾಮಾಜಿಕವಾದ ಸಂಬಂಧ ಗಳೂ, ಕೆಳವರ್ಗದಲ್ಲಿ ಬರುವ ಮೇಲು ಜಾತಿ ಬಡವ ರಿಗೂ, ಕೆಳಜಾತಿ ಬಡವರಿಗೂ, ಇರುವ ಆರ್ಥಿಕವಾದ ಸಾಮಾಜಿಕವಾದ, ಶೈಕ್ಷಣಿಕವಾದ ಸಂಬಂಧಗಳೂ : ಈ ಮಧ್ಯೆ ಮಧ್ಯಮ ವರ್ಗದಲ್ಲಿ ಬರುವ ಮೇಲು ಜಾತಿ ಮತ್ತು ಕೆಳಜಾತಿ ಮಧ್ಯಮ ವರ್ಗದವರುಗಳಿಗೆ, ಮೇಲ್ವರ್ಗ ಹಾಗೂ ಕೆಳವರ್ಗದವರೊಡನೆ ಇರುವ ಸಂಬಂಧಗಳ ಬಗ್ಗೆ ವಿವರಿಸುತ್ತಾ, ಪ್ರಾಥಮಿಕ ಪಾಠ ಶಾಲಾ ಮಕ್ಕಳಿಗೆ ಪಾಠ ಮಾಡುವಂತೆ ಒತ್ತಿ ಒತ್ತಿ ಹೇಳುತ್ತಾ, ಕೆಳಜಾತಿ ಬಡವರಲ್ಲಿ ಎರಡು ಗುಂಪಾಗಿ ವಿಂಗಡಿಸಿ ನಿರಕ್ಷರಿಗಳು ಮತ್ತು ಕಲಿತವರು. ಕಲಿತವ ರಲ್ಲಿ ಸವಲತ್ತುಗಳನ್ನು ಗಿಟ್ಟಿಸಿಕೊಂಡು ತಮ್ಮ ಸುಖ ಜೀವನಕ್ಕಾಗಿ ಸ್ವಾರ್ಥ ಸಾಧನೆ ಮಾಡಿಕೊಳ್ಳುತ್ತಿರು ವವರು ಒಂದೆಡೆಯಾದರೆ, ಪ್ರಗತಿ ಪರವಾದ ಚಿಂತನೆ ಗಳತ್ತಾ ನಡೆಯುತ್ತಾ ಸಂಘಟಿತರಾಗಿ ಹೋರಾಟ ನಡೆ ಸುತ್ತಾ, ಉದಾಹರಣೆಗೆ ಡಿ. ಎಸ್. ಎಸ್. ನಂತಿರು ವವರು, ಇನ್ನೊಂದೆಡೆ ಇದ್ದಾರೆಂದೇ ವಿವರಿಸಿದರು.

**ದಿನಾಂಕ 7. 5. 88 ರಂದು ಬೆಳಿಗ್ಗೆ**

**ವಿಷಯ : ದಲಿತರು ಮತ್ತು ಕಾನೂನು**

**ಉಪನ್ಯಾಸಕರು ಎಸ್. ಮರಿಸ್ವಾಮಿ**

ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಕಾನೂನು ಚೌಕಟ್ಟಿ ನೊಳಗೆ ದಲಿತರು ಇಷ್ಟೊತ್ತಿಗೆ ಎಷ್ಟು ಭಾಗ ಅಭಿ ವೃದ್ಧಿ ಹೊಂದಬೇಕಿತ್ತು. ಆದರಿಂದ ವಂಚಿತರಾಗಿ ದ್ದಾರೆ. ಕಾನೂನುಗಳಿಂದ ದಲಿತರಿಗೆ ಹೆಚ್ಚು ಭಾಗ ಅನ್ಯಾಯವಾಗಿದೆಯೆಂದು ; ದಲಿತರ ಕುಟುಂಬ, ಜನಸಂಖ್ಯೆ, ಸರ್ಕಾರ ಅವರ ಅಭಿವೃದ್ಧಿಗೆ ಬಳಸಿರುವ, ಹಣಕಾಸು, ಉಪಯೋಗ, ಅನ್ಯಾಯ, ದುರುಪ ಯೋಗ ; ಇವುಗಳನ್ನು ಅಂಕಿ ಸಂಖ್ಯೆಗಳ ಉದಾ ಹರಣೆಯೊದಿಗೆ ವಿವರಿಸಿದರು. ದಲಿತರು ಕೃಷಿ ಭೂಮಿಯೊಡನೆ ಹತ್ತಿರ ಸಂಬಂಧವಿಟ್ಟುಕೊಂಡು ಕೂಲಿ ದುಡಿಮೆಯಿಂದಲೆ ಜೀವಿಸುತ್ತಿದ್ದಾರೆ. ಇದ ರಿಂದಲೂ ಅವರು ಹಿಂದುಳಿದಿದ್ದಾರೆ. ದಲಿತರಿಗೂ ಭೂಮಿಗೂ ಇರುವ ಹತ್ತಿರ ಸಂಬಂಧದಿಂದ ಅವರನ್ನು ದೂರವಾಗಿಸಿ, ಅವರು ಆರ್ಥಿಕವಾಗಿ ಮುಂದುವರಿ ಯಲು ನಾವು ಹೆಚ್ಚಾಗಿ ಕೈಗಾರಿಕೆಗಳಿಗೆ ಆದ್ಯತೆ ಕೊಡ ಬೇಕೆಂದರು.

**12.30 ರಿಂದ ವಿಷಯ**

**ದಲಿತರು ಮತ್ತು ಧಾರ್ಮಿಕ ದಬ್ಬಾಳಿಕೆ**

**ಉಪನ್ಯಾಸಕರು ಬಂಡಾಯ ಕವಿ ಸಿದ್ಧಲಿಂಗಯ್ಯ**

ಮಾನವ ಕಾಡು ಜೀವನದ ಮೂಲದಿಂದ ಪರಿ ವರ್ತನೆಗೊಂಡು ಆಹಾರ ಸಂಗ್ರಹಣೆಯ ಕಾಲದಿಂದ

ಮನುಷ್ಯನ ಆರ್ಥಿಕ ಚಟುವಟಿಕೆಗಳಿಗನುಗುಣವಾಗಿ ಸಂಪ್ರದಾಯ, ಪದ್ಧತಿ, ಆಚರಣೆ, ಭಯ ಹುಟ್ಟಿ ಕೊಂಡಿವೆ.

**ಬೇಟೆಯ ಹಂತದಲ್ಲಿ**

ದೇವತೆಗಳು, ದೈವ ಪುರಾಣಗಳು ಹುಟ್ಟಿಕೊಂಡಿವೆ. ಇಲ್ಲಿ ಹೆಚ್ಚು ಪುರುಷ ದೇವತೆಗಳು ಬಂದವು. ಆದರೆ ಹೆಚ್ಚಾಗಿ ಶೋಷಣೆ ಇರಲಿಲ್ಲ.

**ಪಶುಪಾಲನೆಯ ಹಂತದಲ್ಲಿ**

ಆಕಾಶ ದೇವತೆಗಳು. ಗೋಮಾತೆ ಇತ್ಯಾದಿ ಹಲ ದೇವತೆಗಳು ಹುಟ್ಟಿಕೊಂಡಿವೆ. ಇದೇ ಸಂದರ್ಭದಲ್ಲಿ ಮಹಾಭಾರತದಂತಹ ಪುರಾಣಗಳು ಹುಟ್ಟಿಕೊಂಡಿವೆ.

**ಕೃಷಿಯ ಆರಂಭದ ಕಾಲ**

ಕೃಷಿಯನ್ನು ಆರಂಭಿಸಿದವರು ಸ್ತ್ರೀ (ಮಹಿಳೆ) ಆಗ ಕೃಷಿಗನುಗುಣವಾಗಿ ಹೆಚ್ಚಾಗಿ ಆರ್ಥಿಕ ಚಟುವಟಿಕೆ ಕೊಟ್ಟವನು ಬಲರಾಮ. ಈ ಸಂದರ್ಭದಲ್ಲಿ ಆರ್ಯ ರಲ್ಲಿ ಗಂಡು ದೇವತೆಗಳು. ದ್ರಾವಿಡರಲ್ಲಿ ಹೆಣ್ಣು ದೇವತೆಗಳು ಕಂಡು ಬರುತ್ತವೆ. ಹೀಗಾಗಿಯೇ ಉತ್ತರ ಭಾರತದಲ್ಲಿ ಗಂಡು ಧೇವತೆಗಳು ದಕ್ಷಿಣ ಭಾರತದಲ್ಲಿ ಹೆಣ್ಣು ದೇವತೆಗಳು ಕಂಡು ಬರುತ್ತವೆ.

**ಕೈಗಾರಿಕಾ ಹಂತದಲ್ಲಿ**

ಮತ್ತೆ ಪುರುಷ ದೇವತೆಗಳು ಕಾಣಿಸಿಕೊಳ್ಳುತ್ತವೆ. ಶೇಕಡಾ 70 ಭಾಗ ದೇವತೆಗಳು ಕನಸಿನಲ್ಲಿ ಹುಟ್ಟಿ ಕೊಂಡು. ಕಲ್ಲಿನ ರೂಪಗಳಲ್ಲಿ ರೂಪಗೊಂಡು ಸ್ಥಾಪನೆ ಯಾಗುತ್ತವೆ ಎಂದು ಹೇಳಿದರು.

**ದಿನಾಂಕ 8. 5. 88ರಂದು**

**ವಿಷಯ ಭೂಮಿ ಸಮಸ್ಯೆ ಮತ್ತು ಹೋರಾಟಗಳು**

ಎಂ. ಡಿ. ಗಂಗಯ್ಯನವರ ಅಧ್ಯಕ್ಷತೆಯಲ್ಲಿ ಚಂದ್ರ ಪ್ರಸಾದ್ ತ್ಯಾಗಿಯವರು ಉಪನ್ಯಾಸ ನೀಡುತ್ತಾ— "ಬ್ರಿಟಿಷರ ಆಳ್ವಿಕೆಯಲ್ಲಿ ದಲಿತರು ಭೂಮಿಯ ಒಡೆತನ ದಲ್ಲಿ ಬಹಳ ಹಿಂದೆ ಬಿದ್ದಿದ್ದರು. ಆದರೂ ಅಲ್ಪ ಸ್ವಲ್ಪ ಭೂಮಿ ದಲಿತರಿಗೆ ಸಿಕ್ಕಿದೆ. ಅಲ್ಲದೆ ಮಹಾ ರಾಜರ ಆಳ್ವಿಕೆಯಲ್ಲೂ ದಲಿತರಿಗೆ ಅಲ್ಪ ಸ್ವಲ್ಪ ಭೂಮಿ ಸಿಕ್ಕಿದೆ. ಹೇಗೆಂದರೆ ಕುಳವಾಡಿ, ತಳವಾರ, ತೋಟಿ, ಸೇರೆಗಾರ, ನೀರಗಂಟಿ, ವಾಸ, ಜೋಗಿ, ಕಣಿಯ, ಮುಂತಾಗಿ ತಮ್ಮ ಹಕ್ಕುಗಳೆಂದು ಚಾಕರಿ ಮಾಡುತ್ತಾ ಊರಿನ ಹಿಟ್ಟು ಬಿಟ್ಟಿ ; ಆಗು ಹೋಗು ಗಳನ್ನು ಗಮನಿಸುತ್ತಿದ್ದವರಿಗೆ ಮುಪ್ಪತ್ತಾಗಿ ಕೊಡಲ್ಪ ಟ್ಟಿದ್ದಾರೆ. ಇದನ್ನೇ ಇನಾಂ ಭೂಮಿ ಎನ್ನುತ್ತಾರೆ. ಹಿಂದಿನ ಹಳೆಯ ಮೈಸೂರು ಕಾಲದಲ್ಲಿ ಈ ಭೂಮಿ ಹೆಚ್ಚಾಗಿ ಕಂಡು ಬಂದಿದೆ. ಅದರಂತೆಯೇ ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ದಲಿತರು ಅದೇ ಭೂಮಿಯನ್ನು ಉಳಿಸಿಕೊಂಡು ಬಂದು ಭೂಮಿಯಿಂ ದಲೇ ಜೀವಿಸುತ್ತಿರುವುದನ್ನು ನಾವು ಕಾಣುತ್ತೇವೆ. ಆದರೆ ಕರ್ನಾಟಕದ ಬೇರೆ ಭಾಗಗಳಲ್ಲಿ ದಲಿತರ ಅದೇ ಭೂಮಿಯನ್ನು ಮೇಲು ಜಾತಿ ಬುದ್ಧಿವಂತರು ಹಲ ವಾರು ರೂಪಗಳಿಂದ ದಲಿತರಿಗೆ ಮೋಸಮಾಡಿ ದಲಿ ತರ ಭೂಮಿ ಲಪಟಾಯಿಸಿದ್ದಾರೆ.

ತರಿ, ಖುಷ್ಕಿ, ಬಾಗಾಯ್ತು, ಇವುಗಳಲ್ಲಿ ಫಲ ವತ್ತಾದ ಭೂಮಿ. ನೀರಾವರಿ ಭೂಮಿ. ದಟ್ಟ ಅರಣ್ಯಗಳ (ಕಾಡುಗಳ) ಭೂಮಿ, ಒಣ ಭೂಮಿ, ಬಂಜರು ಭೂಮಿ, ಸಿ. ಮತ್ತು ಡಿ. ವರ್ಗದ ಭೂಮಿ ಮುಂತಾಗಿ ವಿಂಗಡಿಸಿರುವುದನ್ನು ವಿವರಿಸಿದರು. ದಲಿತರಿಗೆ ಭೂಮಿ ಕೊಟ್ಟಿರುವಲ್ಲಿ ಭೂಮಿ ಯಾವ ತ್ತಿಗೂ ಪರಬಾರೆ ಮಾಡಕೂಡದೆಂದು, ಕಾನೂನನ್ನು ಅಳವಡಿಸಿದ್ದಾರೆ. ಇಂತಹ ಕಾನೂನುಗಳನ್ನು ಉಲ್ಲಂ ಘಿಸಿ, ಹಾಗೂ ಹೆಂಡ-ತುಂಡಿನಿಂದ, ಊಟ–ತಿಂಡಿ ಯಿಂದ, ಬಟ್ಟೆ-ಬರೆಗಳಿಂದ, ಕಡ್ಲೆ-ಪುರಿಗಳಿಂದ, ದಲಿ ತರಿಗೆ ಮೋಸ ಮಾಡಿ ಭೂಮಿಯೆಲ್ಲಾ ಮೇಲುಜಾತಿ ಶ್ರೀಮಂತರ ಕೈಸೇರಿತ್ತು. ಇಂತಹ ಭೂಮಿಯನ್ನು, ಭೂ ಮಾಲಿಕರು ಹಾಗೂ ಮಠಾಧಿಪತಿಗಳ ಒಡೆತನ ದಲ್ಲಿರುವ ಭೂಮಿಯಲ್ಲಿ ನೂರಾರು ವರ್ಷಗಳಿಂದ ದಲಿತರೇ ಉಳುಮೆ ಮಾಡಿ, ದುಡಿಯುತ್ತಾ, ಒಡೆ ಯನಿಗೆ ಗುತ್ತಿಗೆ ಕೊಡುತ್ತಿದ್ದ ಭೂಮಿಯನ್ನು ಉಳುವವನೆ ಭೂಮಿಯ ಒಡೆಯನಾಗಬೇಕೆಂದು ತಿಳಿದು, ಅಂತಹ ಭೂಮಿಯನ್ನು ಭೂಮಾಲೀಕರು, ಭೂಮಿ ಉಳುತ್ತಿರುವ ದಲಿತನಿಗೆ ವಾಪಸ್ ಬಿಟ್ಟು ಕೊಡಬೇಕೆಂದು, ಬಿ. ಬಸವಲಿಂಗಪ್ಪನವರು ಕಂದಾಯ ಮಂತ್ರಿಗಳಾಗಿದ್ದಾಗ ಕಾನೂನೊಂದನ್ನು ಜಾರಿಗೊಳಿಸಿ ದ್ದನ್ನು, ಹಾಗೂ ಭೂಮಾಲಿಕರು ಅದರ ವಿರುದ್ಧ ಹೈಕೋರ್ಟ್ ಮತ್ತು ಸುಪ್ರೀಂಕೋರ್ಟ್‌ಗಳಿಗೆ ಹೋಗಿ ತಂಡ ತಡೆಯಾಜ್ಞೆ, ಅದರ ವಿರುದ್ಧ ದ. ಸಂ. ಸ. ಹೋರಾಟಗಳನ್ನು ವಿವರಿಸಿದರು.

ಶಿಬಿರದಿಂದ ಕಾರ್ಯಕರ್ತರುಗಳಾದ ಅನುಕೂಲ. ಅವರುಗಳೆ ಒಬ್ಬೊಬ್ಬರಾಗಿ ವಿವರಿಸುವಂತೆ ಜಗತ್ತಿನ ಎಲ್ಲಾ ವಿಷಯಗಳ ಬಗ್ಗೆ. ಅದರಲ್ಲೂ ನಮ್ಮ ದೇಶದ ಎಲ್ಲಾ ರೀತಿಯ ಅವ್ಯವಸ್ಥೆಯನ್ನು ತಿಳಿಸುವ ಸಾಹಿತ್ಯ ವನ್ನು ಹೆಚ್ಚು, ಹೆಚ್ಚು ಅಧ್ಯಯನ ಮಾಡಬೇಕು. ಜ್ಞಾನಾರ್ಜನೆಯನ್ನು ಹೆಚ್ಚಿಸಿಕೊಳ್ಳಬೇಕೆಂಬ ಹಸಿವು ಹೆಚ್ಚಾಗಿದೆಯೆಂದು ಕಂಡು ಬಂತು.

ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಹಾಗೂ ಧಾರ್ಮಿಕವಾದ ವಿಷಯ ಗಳಲ್ಲಿ ದಲಿತರ ಸಮಾನತೆಗಾಗಿ, ಸಮಾಜದ ಸಮಗ್ರ ವಾದ ಬದಲಾವಣೆಗಾಗಿ ಎಂತಹ ಸಂಘಟನೆಯಾಗಬೇಕು ಯಾವ ಯಾವ ಮಟ್ಟದಲ್ಲಿರಬೇಕು, ಹೋರಾಟದ ದಾರಿಯನ್ನು ಯಾವ ಯಾವ ರೂಪಗಳಲ್ಲಿ ಕಂಡುಕೊಳ್ಳ ಬೇಕು ಎಂಬಂತಹ ವಿಷಯಗಳ ಬಗ್ಗೆ, ಸಮಸ್ಯೆಗಳ ಬಗ್ಗೆ, ಹೆಚ್ಚು ಹೆಚ್ಚು ಚರ್ಚೆ, ವಾದ ವಿವಾದಗಳು ಮತ್ತು ಕ್ರಿಯಾತ್ಮಕವಾದ ಕೆಲಸಗಳು ಹಾಗೂ ಆದ ಅನುಭವಗಳನ್ನು ಮುಂದಿಟ್ಟುಕೊಂಡು, ಪರಿಹಾರ ಕ್ಕಾಗಿ ಹೆಚ್ಚಾಗಿ ಚಿಂತಿಸಬೇಕಾಗಿದೆಯೆಂಬುದು ಕಂಡು ಬಂತು. ●

# ಕೈನಡು ಗ್ರಾಮದ ಭೂಮಿ ಹೋರಾಟ

**ಚಿತ್ರದುರ್ಗ ಜಿಲ್ಲೆಯ ಕೈನಡು ಗ್ರಾಮದಲ್ಲಿ ಅನೇಕ ದಿನಗಳಿಂದ ಭೂಮಿಗಾಗಿ ದಲಿತರು ನಡೆಸಿದ ಹೋರಾಟ ಅಲ್ಲಿನ ಜಮೀನ್ದಾರರಿಗೆ ಕೆಂಗಣ್ಣು ಮಾಡಿಸಿತ್ತು.**

**ತೊಂದರೆಯನ್ನು ದಸಂಸದ ಕೆಲವು ಕಾರ್ಯಕರ್ತರು ಎಲ್ಲರಿಗೂ ಸಮ್ಮತ ವಾಗುವ ಹಾಗೆ ಪರಿಹರಿಸಿದ ವರದಿ.**



ಚಿತ್ರದುರ್ಗಜಿಲ್ಲೆ, ಹೊಸದುರ್ಗ ತಾಲ್ಲೂಕು ಕೈನಡು ಸುಮಾರು 100-150 ಕುಟುಂಬಗಳ ಗ್ರಾಮ. ಇಲ್ಲಿನ ಸರ್ವೆನಂ. 1 (ಒಂದು) ರಲ್ಲಿ 1074 ಎಕರೆ 27 ಗುಂಟೆ ಅಮೃತ ಮಹಲ್ ಕಾವಲು ಅಥವಾ ಅಮಾನಿ ಕಾವಲ್ ಭೂಮಿಯನ್ನು ದ. ಸಂ. ಸ. ದ ಕೈನಡು ಚಂದ್ರಪ್ಪ ಹಾಗೂ ಪ್ರಭಾಕರ್ ರವರ ಮುಖಂಡತ್ವದಲ್ಲಿ ಭೂ ರಹಿತ, ಕೈನಡು, ತೋಣಚೀನ ಹಳ್ಳಿ, ಕುಂಚಿನಕೆರೆ ಬೋವಿಹಟ್ಟಿ, ಗ್ರಾಮದ ಎಲ್ಲಾ ಜಾತಿ ಬಡವರಾದ ಬೋವಿಗಳು, ಹರಿಜನರು, ದೇವಾಂಗ, ಆಚಾರ, ನಾಯಕರು ಬೆಸ್ತರು ಲಿಂಗಾಯಿತರು, ಕುಂಬಾರರು, ಕುರುಬರು, ಲಂಬಣಿಗರು, ಮುಂತಾದಸುಮಾರು ಒಂದು ನೂರು ಕುಟುಂಬದವರು ದ. ಸಂ. ಸ. ಅಡಿಯಲ್ಲಿ ಸ್ವಾಭಿಮಾನದ ಅರಿವಿನೊಂದಿಗೆ, ತಮ್ಮ ಸ್ವಂತ ಜೀವನ ಮಾರ್ಗಕ್ಕಾಗಿ ತಾ॥ 21-11-1987 ರಂದು ಭೂ ಹೋರಾಟಕ್ಕೆ ಸಜ್ಜಿತರಾಗಿ, ತಾರೀಖು 22-11-87 ರಂದು ಭಾನುವಾರ ಭೂಮಿ ಉಳಲು ಪ್ರಾರಂಭಿಸಿದರು.

ದಲಿತರಿಗೆ ಭೂಮಿ ದಕ್ಕೀತೆಂಬ ಕಿಚ್ಚಿನಿಂದ ಇಲ್ಲಿ (ಕೈನಡುಗ್ರಾಮದ) ಕುರುಬ ಜನಾಂಗದ ಶ್ರೀಮಂತ ವರ್ಗವನ್ನು ಇದೇ ಊರಿನ, ಶ್ರೀಮಂತ ಹಾಗು ಈತನ ಮಕ್ಕಳಾದ ಮಂಡಲ್ ಮೆಂಬರ್ ರಾಮಪ್ಪ ಹಾಗು ಇಲ್ಲಿ ಪೋಸ್ಟ್ ಮಾಸ್ಟರ್ ನಿಂಗಯ್ಯನ ಚಿತವಣೆ ಮತ್ತು ಕುಮ್ಮಕ್ಕಿನಿಂದ, ತಾ॥ 24-11-1987 ರಂದು ದಲಿತರು ಅಮೃತ ಮಹಲ್ ಕಾವಲು ಕಾಡನ್ನು ಕಡಿದು ಭೂಮಿ ಉಳುಮೆ ಮಾಡುತ್ತಿರುವಾಗ, ಕೈನಡು ಗ್ರಾಮದ ಸುಮಾರು 50–60 ಜನ ಶ್ರೀಮಂತ ವರ್ಗದವರೂ ಮಚ್ಚು, ದೊಣ್ಣೆ, ಕೊಡಲಿ, ಇತರೆ ಆಯುಧ ಸಮೇತರಾಗಿ ಸಜ್ಜಿತರಾಗಿ ನೇಗಿಲುಗಳನ್ನ ಕಟ್ಟಿ ಕೊಂಡು ದಲಿತರು ಉಳುಮೆ ಮಾಡುತ್ತಿದ್ದ ಭೂಮಿಯನ್ನೇ ಇನ್ನೊಂದು ಕಡೆಯಿಂದ ಉಳುಮೆ ಮಾಡಲು ಪ್ರಾರಂಭಿಸಿ ಕೇಣಿ ಮಾಡ ಹೊರಟರು– ಬಾಯಿಗೆ ಬಂದಂತೆ ಬೈಯ್ದರು, "ನಿಮ್ಮಪ್ಪಂದ ಜಮೀನು, ನಿಮಗೇನು ಕೊಟ್ಟು ಬಿಟ್ಟಿದೆಯಾ, ಹೊಡಿ ಬೇಕುಕಣೋ ಎಷ್ಟೋ ಹಂಕಾರಾನೋ ಈನನ್‌ಮಕ್ಕಳಿಗೆ, ಬ್ಯಾಸಾಯ ಮಾಡಕೆ ಬರ್ರೊ ಇವತ್ತು ಮಡ್ರುರ್ ಆಗ್ಲಿ" ಎಂದು ಗರ್ಜಿಸಿದರು. ದಲಿತರ :- ಉತ್ತರಿಸಿದರು ನಿಮಗೇನು ಅಡ್ಡಿ ಮಾಡಿದೆವಾ ? ನಿಮ್ಮಾರಕ್ಕೆ ನೀವೂ ಉಳುಮೆ ಮಾಡಿಕೊಳ್ಳಿ ಎಂದರು.

ಶ್ರೀಮಂತ ವರ್ಗ :- ಈವತ್ತು ಏನಾದರೂ ಒಂದು ತೀರ್ಮಾನ ಆಗಲೇ ಬೇಕು ಹೊಡೆದು ಬಿಡುತ್ತೇವೆ, ಎಂದು ನೀವೂ ಉಳುಮೆ ಮಾಡಕೂಡದು, ನಾವೂ ಉಳುಮೆ ಮಾಡಲ್ಲ. ನಮಗೂ ಹಂಚಿ ಕೊಡಿ, ಇಲ್ಲ ಅಂದರೆ ನೀವ್ಕೊಂದು ಅರಗೆದರೆ ನಾವೊಂದು ಕಡೆ ಬೀಜ ಹಾಕುತ್ತೇವೆ, ಎಂದು ಮಚ್ಚುಗಳನ್ನ ಎತ್ತಿದರು.

ದಲಿತರು :- ಹೊಡೆಯುವ ಹಾಗಿದ್ದರೆ ಹೊಡಿರಿ, ಎಂದರು

ಶ್ರೀಮಂತವರ್ಗ ;- ಮೋಣಚೀನ ಹಳ್ಳಿ ಬೋವಿಗಳಿಗೂ ಇದಕ್ಕೆ ಸಂಬಂಧ ಏನು ? ಇವಾರ್‍ಯಾಕೆ ಬರಬೇಕು , ಬಡವರಂತೆ ಬಡವರು ನಮಗೆ ಧನ ಕರುಗಳು ಎಮ್ಮೆಗಳು ಮೇಯಕ್ಕೆ ಜಾಗ ಇಲ್ಲ, ನಿಮಗೆ ಕೊಟ್ಟು ಜಮೀನೆಲ್ಲ ಮಾರಿಕೊಳ್ಳಿ ಇಲ್ಲಿ ಉಳಾಕೆ ಬನ್ನಿ ? ಎಂದು ಸವಾಲು ಹಾಕಿದರು.

ಭೂಮಿ ಮೇಲೆ ಎರಡೂ ಗುಂಪುಗಳಲ್ಲೂ ಘರ್ಷ... ಹೊಡೆದಾಟ ಬಡಿದಾಟಗಳ ಸಮಯ ಪರಿಸ್ಥಿತಿ ತುಂ... ವಿಕೋಪಕ್ಕೆ ಹೋಗಿ ಭಯಂಕರ ಹಾಗೂ ಗಂಭ... ಸ್ಥಿತಿಯನ್ನು ಮುಟ್ಟಿದ್ದನ್ನು ಮನಗಂಡ ದ. ಸಂ. ಸ... ಹೊಸದುರ್ಗ ತಾಲ್ಲೂಕು ಸಂಚಾಲಕ ಕೈನಡ... ಚಂದ್ರಪ್ಪ ಮತ್ತು ಪ್ರಭಾಕರ್ ರವರು ಉತ್ತ... ಬುದ್ಧಿಶಕ್ತಿಯಿಂದ ಹಾಗೂ ಸಮಯೋಚಿತ ತೀರ್ಮಾ... ದಿಂದ ಎಷ್ಟೋಜನರ ಪ್ರಾಣ ಮಾನಗಳು ಉಳಿದ... ಒಂದು ತೀರ್ಮಾನಕ್ಕೆ ಬಂದರು ತಾ॥ 30-11-198... ರಂದು ಒಂದು ದಿನ ಗ್ರಾಮದ ಎಲ್ಲಾ ಜನರ, ಸ...

ಯನ್ನು ಕರೆಯೋಣ ಅಲ್ಲಿ ಏನು ತೀರ್ಮಾನ ಆಗುತ್ತೊ ಹಾಗೆ ನಡೆದು ಕೊಳ್ಳೋಣ ಎಂದಾಯಿತು ಎಲ್ಲರೂ ಸಮ್ಮತಿಸಿದರು. ಉಳುಮೆ ಮಾಡುತ್ತಿದ್ದ ಎರಡೂ ಗುಂಪೂ ವಾಪಸ್ ಆದರು.

ಅದೇ ರೀತಿ ತಾರೀಖು 30-11-1987 ರಂದು ರಾತ್ರಿ ಸುಮಾರು 9 ಗಂಟೆಗೆ ಊರ ಮಧ್ಯದ ದೇವ ಸ್ಥಾನದ ಒಳ ಕೈನಡು ಗ್ರಾಮದ ಎಲ್ಲಾ ಜನತೆ, ಮೇಲ್ಕಂಡ ಸುತ್ತಮುತ್ತಲ ಗ್ರಾಮದ ಭೂಹೀನ ದಲಿತರು ಹೊಸದುರ್ಗ ಶಾಖೆಯ ದ. ಸಂ. ಸ. ಬಳಗ, ಹಾಗೂ ದ. ಸಂ. ಸ ತುಮಕೂರು ಜಿಲ್ಲಾ ಸಮಿತಿ ಸದಸ್ಯ ಕೃಷ್ಣಪ್ಪ ಬೆಲ್ಲದಮಡು ಇವರನ್ನೆಲ್ಲ ಒಳ ಗೊಂಡು ಸಭೆ ಕರೆಯಲಾಯಿತು. ಗ್ರಾಮದಲ್ಲಿ ಡಂಗೂರವನ್ನು ಸಾರಿ ಸಭೆ ಸೇರಿಸಲಾಯಿತು. ದೇವ ಸ್ಥಾನದ ಒಳಗಡೆ, ಮುಂಭಾಗದ ಜಗಲಿ ಮೇಲೆ, ಮುಂದಿನ ಅಂಗಳದಲ್ಲಿ ಹೀಗೆ ಮೂರು ಹಂತವಾಗಿ ಸುಮಾರು 250-300 ಜನರ ಸಭೆ ಸೇರಿತ್ತು ಪರಸ್ಪರ ಚರ್ಚೆ ಪ್ರಾರಂಭವಾಯಿತು. ಗುಂಪು ಘರ್ಷಣೆಗಳಲ್ಲಿ ಆಡಿದ ಮಾತುಗಳನ್ನು ಸಭೆಯಲ್ಲಿ ಒಬ್ಬರಿಗೊಬ್ಬರು ಪ್ರಶ್ನೆ ಮಾಡಿಕೊಳ್ಳುತ್ತಾ ಕಾಲವ್ಯಯ ಮಾಡಿದರು.

ದಲಿತರಲ್ಲಿ ಒಬ್ಬ ಎದ್ದು ನಿಂತು ಭೂಮಿ ಇಲ್ಲದ ದಲಿತರು ನಾವು ಭೂಮಿ ಉಳುಮೆ ಮಾಡಹೊರಟರೆ ನಮ್ಮ ವಿರೋಧಿಗಳ ಗುಂಪಿನವರ್‍ಯಾಕೆ ನಮ್ಮನ್ನು ಬೈಬೇಕಾ ಇವರೆಂಡರನ್ನು ತಂದ ಹಾಗೆ ಅಲ್ಲವೇ ನಮ್ಮ ಹೆಂಡರುಗಳನ್ನು ತಂದಿರುವುದು ? ಎಂದ ಸಭೆಯಲ್ಲಿ ಇದಕ್ಕೆ ಸರಿಯಾದ ಉತ್ತರ ಇಲ್ಲವಾಯಿತು. ಹೀಗೆ ನಿಜವಾದ ದಿಕ್ಕಿಗೆ ಚರ್ಚೆ. ಬಾರದೆ ಗೊಂದಲ ಗದ್ದಲ ಎದ್ದಿತು. ಇಲ್ಲಿ ಮುಖ್ಯವಾಗಿ ಮೂರು ಅಭಿಪ್ರಾಯ ಗಳು ಎದ್ದಿದ್ದವು. 1. ಭೂರಹಿತ ಎಲ್ಲಾ ಬಡಜನತೆ ಉಳುಮೆ ಮಾಡಿಕೊಳ್ಳಲಿ. 2. ದನಕರು ಎಮ್ಮೆಗಳು ಮೇಯಲು ಜಾಗ ಬೇಕು–ಆದ್ದರಿಂದ ಯಾರು ಉಳುಮೆ ಮಾಡಬಾರದು ಮತ್ತು 3. ಕೇವಲ ಕೈನಡು ಗ್ರಾಮದ ಜನತೆಗೆ ಪ್ರತಿಯೊಬ್ಬರಿಗೂ ಹಂಚಬೇಕು ಈ ರೀತಿ ಗೊಂದಲದಲ್ಲಿ ಮುಳುಗಿತು ಸಭೆ. ಇಲ್ಲಿನ ವಿಶೇಷತೆ ಎಂದರೆ ಇಷ್ಟೆಲ್ಲ ಗುಂಪು ಘರ್ಷಣೆಗಳಿಗೆ ಕಾರಣರಾದರು ಎಂದು ಹೇಳುತ್ತಿರುವ ಶ್ರೀಮಂತ ಕುಟುಂಬದವರಾದ ಕಾಳಿಕುಲ್ ಸಾಗರಪ್ಪ ಅತನ ಮಕ್ಕಳು ಮಂಡಲ್ ಸದಸ್ಯ ರಾಮಪ್ಪ ಮತ್ತು ಬಿ. ಪಿ. ನಿಂಗಯ್ಯ (ಪೋಸ್ಟ್‌ಮಾಸ್ಟರ್) ಇವರು ಸಭೆಗೆ ಬಾರದೆ ಸಭೆ ಜರುಗುವ ದೇವಸ್ಥಾನದ ಪಕ್ಕದ ಮನೆಯಲ್ಲಿ ಇದ್ದಿದ್ದು ಒಂದು ವಿಶೇಷತೆಯೇ ಅಲ್ಲದೇ ಮತ್ತೇನು.

ಸಭೆಯ ಗೊಂದಲದ ಪರಿಸ್ಥಿತಿ ಕಂಡ ಕೃಷ್ಣಪ್ಪ ಬೆಲ್ಲದಮಡು ಎದ್ದು ನಿಂತು ಸಭೆಯನ್ನು ನಿಯಂತ್ರಿಸಿ, ಜನತೆಗೆ ದ. ಸಂ. ಸ. ದ ಹುಟ್ಟು ಬೆಳವಣಿಗೆ, ಸಿದ್ದಾಂತ, ವ್ಯಾಪ್ತಿ ಚಟುವಟಿಕೆ ಚಳುವಳಿಗಳನ್ನು ವಿವರವಾಗಿ ತಿಳಿಸಿದರು. ಇದು ಕೇವಲ ಹೊಲೆ ಮಾದಿ ಗರ ಸಂಘವಲ್ಲ ಎಲ್ಲಾ ಜಾತಿ ಬಡವರ ಸಂಘಟನೆ, ಇದು ಈಗಾಗಲೇ ರಾಜ್ಯದಲ್ಲಿ ಅನೇಕ ಹೋರಾಟ ಮಾಡಿದೆ. ಸಮಾಧಾನದಿಂದ ವರ್ತಿಸೋಣ ಎಂದು ಅಲ್ಲಿದ್ದವರಿಗೆ ಸಮಾಧಾನ ಪಡಿಸಿದರು.

ಅಂತೂ ಆ ರಾತ್ರಿ 1-20 ಗಂಟೆ ಕಳೆದರೂ ಒಂದು ತೀರ್ಮಾನಕ್ಕೆ ಸಭೆ ಬರಲಾಗಲಿಲ್ಲ. ಪೂರ್ಣ ಭೂಮಿ ಇಲ್ಲದವರೇ ಉಳುಮೆ ಮಾಡಲಿ ಎಂದು ಒಂದುವಾದ ಒಂದೆರಡು ಎಕರೆ ಇರುವವರೂ ಸೇರಿ ಉಳುಮೆ ಮಾಡಲಿ ಎಂದು ಎರಡು ವಾದಗಳಾಗಿ ಸಮಸ್ಯೆ ಬಗೆ ಹರಿಯದಾಯಿತು. ಅಂತಿಮವಾಗಿ ಹೊಸದುರ್ಗ ದ. ಸಂ. ಸ. ಸಂಘಟನಾ ಸಂಚಾಲಕರು ಸಭೆಗೆ ತಿಳಿಸಿ ದರು ನಾವು ಉಳುಮೆ ಮಾಡುವ ಭೂಮಿ ಅಮೃತ ಮಹಲ್ ಕಾವಲು ಇದಕ್ಕೂ ಗ್ರಾಮಸ್ಥರಿಗೂ ಸಂಬಂಧ ಬರುವುದಿಲ್ಲ ಗೋಮಾಳ ಎಂದು ನೀವೆಲ್ಲ ತಪ್ಪುತಿಳಿದಿದ್ದೀರಿ. ಗೋಮಾಳ ಭೂಮಿ ಕೇವಲ 5-6 ಎಕರೆ ಇರಬಹುದು ಅದರ ತಂಟೆಗೆ ನಾವು ಬರುವುದಿಲ್ಲ ನೀವೂ ಅಮೃತ ಮಹಲ್ ಕಾವಲು ಭೂಮಿಗೆ ತಂಟೆ ತಕರಾರು ಮಾಡಬೇಡಿ. ಸರ್ಕಾರದ ಜೊತೆ ನಾವ್ ... ನಡೆಸಿ ನಾವು ಭೂಮಿಯನ್ನ ದಕ್ಕಿಸಿಕೊಳ್ಳುತ್ತೇವೆ. ಹೋರಾಟದಲ್ಲಿ ಬರುವ ಕಹಿ, ಸಿಹಿ ಎರಡಕ್ಕೂ ನಾವು ಭಾಗಿಗಳಾಗಿರುತ್ತೇವೆ ಎಂದು ಕೇಳಿಕೊಂಡರು ಸಭೆ ಯಲ್ಲಿ ಸರ್ವವರೂ ಇದಕ್ಕೆ ಸಮ್ಮತಿಸಿದರು.

–ವರದಿಗಾರ

# ರುದ್ರಯ್ಯನಿಗೆ ಸವರ್ಣೀಯರ ಕೊಲೆ ಬೆದರಿಕೆ

ಜಾತಿ ಮತ್ತು ಆಸ್ತಿಯ ಗತ್ತಿನಿಂದ ಮೇಲ್ಜಾತಿಯ ಜನ ದಲಿತರ ಮೇಲೆ ಹೇಗೆ ದಬ್ಬಾಳಿಕೆ, ದೌರ್ಜನ್ಯ ಗಳನ್ನು ಎಸಗುತ್ತಾರೆ ಎಂಬುದಕ್ಕೆ ಈ ಕೆಳಗಿನ ಘಟನೆ ಒಂದು ನಿದರ್ಶನ.

ರುದ್ರಯ್ಯ ಮಾಲಂಬಿ ಗ್ರಾಮದ ಒಬ್ಬ ದಲಿತ. ಇವರು ಶನಿವಾರ ಸಂತೆಯ ರೆವಿನ್ಯೂ ಕಚೇರಿಯಲ್ಲಿ ಗ್ರಾಮ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿದ್ದರು. ಇದೇ ಮಾಲಂಬಿ ಗ್ರಾಮದ ಪಟೇಲ್ ನಂಜಪ್ಪ ಮತ್ತು ಕೂಪನ ಅಯ್ಯಪ್ಪನವರ ಮಕ್ಕಳಾದ ಕೆ. ಎ. ಚೆನ್ನಪ್ಪ ಮತ್ತು ಸಹೋದರರಿಗೆ ದೇವರಗದ್ದೆ ವಿಷಯ ವಾಗಿ ತಾಲ್ಲೂಕು ಕಚೇರಿಯಲ್ಲಿ ಕೇಸು ನಡೆಯುತ್ತಿದೆ. ಈ ಮಧ್ಯೆ ಗ್ರಾಮ ಸಹಾಯಕರಾಗಿರುವ ರುದ್ರಯ್ಯ ದೇವರಗದ್ದೆ ಪಹಣಿ (*R.T.C.*)ಯನ್ನು ಪಟೇಲ್ ನಂಜಪ್ಪನವರ ಹೆಸರಿಗೆ ಬರೆದು ಕೊಟ್ಟಿದ್ದಾರೆಂಬ ಕಾರಣದಿಂದ ದಿನಾಂಕ 3-12-87ರ ರಾತ್ರಿ ಕೆ. ಎ. ಚೆನ್ನಪ್ಪ ಸಹೋದರರು ಮತ್ತು ಎಂ. ಎಂ. ರಾಜಪ್ಪ ಎಂಬುವವರು ಒಂದುಗೂಡಿ ರುದ್ರಯ್ಯನವರ ಮನೆ ಹತ್ತಿರ ಬಂದು ಹಲ್ಲೆ ನಡೆಸಿ, ಕೊಲೆ ಬೆದರಿಕೆ ಹಾಕಿ ಹೋಗಿದ್ದರು. ಇದರ ಬಗ್ಗೆ ಶನಿವಾರ ಸಂತೆ ಪೊಲೀಸ್ ಸ್ಟೇಷನ್‌ಗೆ ಅರ್ಜಿ ಕೊಡಲಾಗಿ ದಿನಾಂಕ 19. 12. 87 ರಂದು ಎರಡು ಕಡೆಯವರನ್ನು ಕರೆಸಿ ರಾಜಿ ಮಾಡಿಸಿ ಕಳುಹಿಸಿರುತ್ತಾರೆ.

ಆದರೆ ಅದೇ ದಿನ ಸಾಯಂಕಾಲ ಶನಿವಾರಸಂತೆ ಯಲ್ಲಿಯೇ ರುದ್ರಯ್ಯನವರ ಮೇಲೆ ಚೆನ್ನಪ್ಪ ಹಲ್ಲೆ ನಡೆಸಿರುತ್ತಾರೆ. ಇದಲ್ಲದೆ ದಿನಾಂಕ 25-12-87 ರಂದು ರುದ್ರಯ್ಯನವರು ಗದ್ದೆಗೆ ಹಾಕಿಸಿದ್ದ ಪಂಪ್ ಸೆಟ್ಟಿಗೆ ರಾತ್ರಿಹೊತ್ತಿನಲ್ಲಿ ಸೀಮೆಎಣ್ಣೆ ಸುರಿದು ಬೆಂಕಿ ಹಾಕಿ ಸುಟ್ಟಿರುತ್ತಾರೆ. ನಂತರ ದಿನಾಂಕ 3-1-88 ರಂದು ರಾತ್ರಿ ರುದ್ರಯ್ಯನವರು ತಮ್ಮ ಮನೆ ಮುಂದೆ ಗುಡ್ಡೆ ಹಾಕಲಾಗಿದ್ದ ಭತ್ತದ ಗುಡ್ಡೆಗೆ ಬೆಂಕಿ ಹಚ್ಚಿ ಸುಟ್ಟು ಹಾಕಿರುತ್ತಾರೆ. ಇದರಿಂದ ರುದ್ರಯ್ಯ ನವರಿಗೆ ಸುಮಾರು 30,000/- ರೂಪಾಯಿಗಳ ನಷ್ಟ ಉಂಟಾಗಿದೆ. ಇದರ ಬಗ್ಗೆ ಪೊಲೀಸ್ ಸ್ಟೇಷ ನ್‌ಗೆ ಪುಕಾರು ಕೊಡಲಾಗಿ ಚೆನ್ನಪ್ಪನವರ ಮೇಲೆ ಒಟ್ಟು 5 ಕೇಸುಗಳನ್ನು ದಾಖಲೆ ಮಾಡಿಕೊಂಡಿರುವು ದಾಗಿ ತಿಳಿದು ಬಂದಿದೆ.

ಪೊಲೀಸಿನವರು ಬಂಧಿಸಿ ಕರೆದುಕೊಂಡು ಹೋಗಿ ಕೋರ್ಟಿನಿಂದ ಜಾಮೀನು ಪಡೆದು ಬಂದು ಯಥಾ ಸ್ಥಿತಿ ರುದ್ರಯ್ಯನವರಿಗೆ ಕಿರುಕುಳ ಕೊಡುವುದನ್ನು ಮುಂದುವರೆಸಿದ್ದರಿಂದ ದ. ಸಂ. ಸ. ತಾಲ್ಲೂಕು ಶಾಖೆ ದಿನಾಂಕ 8-2-88 ರಂದು ಪ್ರತಿಭಟನಾ ಮೆರ ವಣಿಗೆ ಮತ್ತು ಸಭೆಯನ್ನು ನಡೆಸಿ ಚೆನ್ನಪ್ಪನ ದೌರ್ಜನ್ಯವನ್ನು ಖಂಡಿಸಿದ್ದಲ್ಲದೆ, ಆತನನ್ನು ಗೂಂಡಾ ಕಾಯ್ದೆಯಡಿ ಬಂಧಿಸಬೇಕೆಂದು ರುದ್ರಯ್ಯನವರಿಗೆ ಪೊಲೀಸ್ ರಕ್ಷಣೆ ಕೊಡಬೇಕೆಂದು ಒತ್ತಾಯಿಸ ಲಾಯಿತು. ಈಗ ಪರಿಸ್ಥಿತಿ ತಣ್ಣಗಿದ್ದರೂ, ಅದರ ಪರಿಣಾಮ ಏನಾಗಬಹುದೆಂದು ಹೇಳಲು ಸಾಧ್ಯವಿಲ್ಲ. ರುದ್ರಯ್ಯನವರಿಗುಂಟಾದ ನಷ್ಟಕ್ಕೆ ಇದುವರೆಗೆ ಯಾವುದೇ ಪರಿಹಾರವೂ ದೊರೆತಿರುವುದಿಲ್ಲ.

ಜಯಪ್ಪ ಹಾನಗಲ

**ಮಾಲಂಬಿ ಗ್ರಾಮದ ರುದ್ರಯ್ಯ ನವರ ಮೇಲೆ ಪಟೇಲರು, ಅವರ ಮಕ್ಕಳು ಭೂಮಿಗಾಗಿ ನಾನಾ ರೀತಿ ಯ ಚಿತ್ರಹಿಂಸೆ ನೀಡುತ್ತಿದ್ದಾರೆ. ರುದ್ರಯ್ಯನ ಸುಮಾರು 30 ಸಾವಿರ ಆಸ್ತಿ ಪಾಸ್ತಿ ಹಾಳು ಮಾಡಿದ್ದಾರೆ.**

R. N. 29681/76 PANCHAMA fortnightly June 1988 Reg. No. B. G. W. 1



ಸಂಪಾದಕ: ಕೆ. ರಾಮಯ್ಯ, ಪ್ರಕಾಶಕ: ರಂಗಸ್ವಾಮಿ ಬೆಲ್ಲದಮಡು, 2ನೇ ಮಹದೇಶ್ವರ ನಿಲಯ, 2ನೇ ಕ್ರಾಸ್ 2ನೇ ಮೇನ್, ಎ. ಕೆ. ಕಾಲೋನಿ, ಹೊಸಳ್ಳಿ, ಬೆಂ.-
ಮುದ್ರಣ: ಸಂದೀಪ್ ಪ್ರಿಂಟರ್ಸ್, 718 ಮಹಡಿ, 6ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40.